KA / :G-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಜೂನ್ ೯, ೨೦೧೧ (ಜ್ಯೇಷ್ಠ ೧೯, ಶಕ ವರ್ಷ ೧೯೩೩) | ಸಂಚಿಕೆ ೨೩ |
|---|---|---|

## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಕರ್ನಾಟಕ ರಾಜ್ಯಪಾಲರ ಸಚಿವಾಲಯ, ರಾಜ ಭವನ, ಬೆಂಗಳೂರು**

**ಪ್ರಕಟಣೆ**

**ಸಂ. ಜಿಎಸ್ 160 ಇಎಸ್‌ಟಿ 2009 (ಭಾ), ದಿನಾಂಕ: 30/5/2011**

ಕರ್ನಾಟಕ ರಾಜ್ಯಪಾಲರ ಸಚಿವಾಲಯ, ರಾಜ ಭವನ, ಬೆಂಗಳೂರು, ಇಲ್ಲಿ ವ್ಯವಸ್ಥಾಪಕರು (ಮನೆವಾರ್ತೆ) ಹುದ್ದೆಗೆ ನೇಮಕಾತಿ ಮಾಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ರಾಜ್ಯಪಾಲರ ಸಚಿವಾಲಯದ ವೆಬ್ ಸೈಟ್ ನಿಂದ ಅರ್ಜಿ ನಮೂನೆಗಳನ್ನು ಡೌನ್‌ಲೋಡ್ ಮಾಡಿಕೊಳ್ಳತಕ್ಕದ್ದು. ಭರ್ತಿ ಮಾಡಿದ ಅರ್ಜಿಗಳನ್ನು ಹುದ್ದೆಯ ವಿವರದ ಕೆಳಗೆ ನಮೂದಿಸಿರುವ ಶುಲ್ಕ ಡಿ.ಡಿ./ ಐ.ಪಿ.ಓ. ರೂಪದಲ್ಲಿ ರಾಜ್ಯಪಾಲರ ಪ್ರಧಾನ ಕಾರ್ಯದರ್ಶಿ, ರಾಜ ಭವನ, ಬೆಂಗಳೂರು–560 001 ಇವರ ಹೆಸರಿಗೆ ಪಾವತಿಯಾಗುವಂತೆ ಪಡೆದುಕೊಂಡು ಇಲ್ಲಿಗೆ ದಿನಾಂಕ:30–06–2011 ಸಂಜೆ 5.00 ಗಂಟೆಯೊಳಗೆ ಅಥವಾ ಮುಂಚಿತವಾಗಿ ತಲುಪುವಂತೆ **ಆರ್.ಪಿ.ಎ.ಡಿ.** ಅಂಚೆ ಮೂಲಕ ಮಾತ್ರ ಸಲ್ಲಿಸುವುದು. ಅರ್ಜಿಗಳನ್ನು ಮುದ್ದಾಂ ಸ್ವೀಕರಿಸಲಾಗುವುದಿಲ್ಲ.

| ಹುದ್ದೆಯ ಹೆಸರು | ಒಟ್ಟು ಹುದ್ದೆ | ವಿದ್ಯಾರ್ಹತೆ ಮತ್ತು ಅನುಭವ (Qualification & Experience) | ವೇತನ ಶ್ರೇಣಿ | ಕರ್ನಾಟಕ ರಾಜ್ಯಪಾಲರ ಸಚಿವಾಲಯದ ಅಧಿಸೂಚನೆ ಸಂಖ್ಯೆ: ಜಿಎಸ್ 160 ಇಎಸ್‌ಟಿ 2009(ಭಾಗ) ದಿನಾಂಕ: 30–5–2011. | | | | | | | | | |
|---|---|---|---|---|---|---|---|---|---|---|---|---|---|
| ವ್ಯವಸ್ಥಾಪಕರು (ಮನೆವಾರ್ತೆ) | 01 | ಪದವಿಪೂರ್ವ ಶಿಕ್ಷಣ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು ಅಥವಾ ತತ್ಸಮಾನವಾದ ಶೈಕ್ಷಣಿಕ ವಿದ್ಯಾರ್ಹತೆ ಹಾಗೂ ಸರ್ಕಾರಿ ಇಲಾಖೆಯ ಮನೆವಾರ್ತೆ ಶಾಖೆಯಲ್ಲಿ **ಕನಿಷ್ಠ 3** ವರ್ಷಗಳ ಅನುಭವ ಹೊಂದಿರಬೇಕು | ರೂ.10000–18150 | ಮೀಸಲಾತಿ | ಸಾಮಾನ್ಯ | ಪ.ಜಾ. | ಪ.ಪಂ. | 1 | 11 (ಎ) | 11 (ಬಿ) | 111 (ಎ) | 111 (ಬಿ) | ಒಟ್ಟು |
| | | | ಇತರೆ | – | 1 | – | – | – | – | – | – | – | 1 |
| | | | ಒಟ್ಟು | – | 1 | – | – | – | – | – | – | – | 1 |
| **ಅರ್ಜಿ ಶುಲ್ಕ : ರೂ.100/–ಸಾ. ಅ. ಅಭ್ಯರ್ಥಿಗಳಿಗೆ ಹಾಗೂ ರೂ. 25/– ಪ.ಜಾ. ಪ.ಪಂ. ಅಭ್ಯರ್ಥಿಗಳಿಗೆ** | | | | | | | | | | | | | |

**ಶೈಕ್ಷಣಿಕ ವಿದ್ಯಾರ್ಹತೆ:** ಪದವಿಪೂರ್ವ ಶಿಕ್ಷಣ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು ಅಥವಾ ತತ್ಸಮಾನವಾದ ಶೈಕ್ಷಣಿಕ ವಿದ್ಯಾರ್ಹತೆ ಹೊಂದಿರಬೇಕು.

**ವಯೋಮಿತಿ:** ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕ: **30/6/2011** ರಂದು ಈ ಕೆಳಗಿನಂತೆ ವಯೋಮಿತಿ ಹೊಂದಿರತಕ್ಕದ್ದು.

| ವರ್ಗೀಕರಣದ ವಿವರ | ಕನಿಷ್ಠ | ಗರಿಷ್ಠ |
|---|---|---|
| ಪ.ಜಾ / ಪ.ಪಂ / ಪ್ರ–1 | 18 | 40 |
| 2ಎ, 2ಬಿ, 3ಎ,3ಬಿ | 18 | 38 |
| ಸಾಮಾನ್ಯ ವರ್ಗ | 18 | 35 |

**ಟಿಪ್ಪಣಿ:** ನೇಮಕಾತಿ ಅಧಿಸೂಚನೆಗೆ ಸಂಬಂಧಿಸಿದ ಹೆಚ್ಚಿನ ವಿವರಗಳನ್ನು ಹಾಗೂ ಅರ್ಜಿ ಭರ್ತಿ ಮಾಡಲು ಸೂಚನೆಗಳನ್ನು ರಾಜ ಭವನದ ವೆಬ್‌ಸೈಟ್ **www.rajbhavan.kar.nic.in** ನಿಂದ ಪಡೆಯಬಹುದು.

ರಾಜ್ಯಪಾಲರ ಅಧೀನ ಕಾರ್ಯದರ್ಶಿ

**ಕರ್ನಾಟಕ ರಾಜ್ಯಪಾಲರ ಸಚಿವಾಲಯ, ರಾಜಭವನ, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ: ಜಿಎಸ್ 160 ಇಎಸ್‌ಟಿ (ಭಾ) 2009, ದಿನಾಂಕ:30.05.2011**

1) ಕರ್ನಾಟಕ ರಾಜ್ಯಪಾಲರ ಸಚಿವಾಲಯದಲ್ಲಿನ ರಾಜ್ಯಪಾಲರ ಮನೆವಾರ್ತೆ ಶಾಖೆಯಲ್ಲಿರುವ ಒಂದು ವ್ಯವಸ್ಥಾಪಕರ ಹುದ್ದೆಯನ್ನು ಕರ್ನಾಟಕ ರಾಜ್ಯಪಾಲರ ಸಚಿವಾಲಯ ಸೇವೆಗಳು (ನೇಮಕಾತಿ) (ತಿದ್ದುಪಡಿ) ನಿಯಮಗಳು, 2011 ಮತ್ತು ತಿದ್ದುಪಡಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 10 ಪಿಆರ್‌ಬಿ 2010 ದಿನಾಂಕ:10.05.2011ರ ಅನ್ವಯ ಖಾಲಿ ಇರುವ (ಒಂದು) ವ್ಯವಸ್ಥಾಪಕರು (ಮನೆವಾರ್ತೆ), ಹುದ್ದೆಯನ್ನು ಭರ್ತಿಮಾಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದೆ.

ಈ ಹುದ್ದೆಯನ್ನು ಸಂದರ್ಶನದ ಮೂಲಕ ಜುಲೈ/ ಆಗಸ್ಟ್ 2011ರಲ್ಲಿ ಭರ್ತಿ ಮಾಡಲು ಉದ್ದೇಶಿಸಿದೆ. ನಿಗದಿಪಡಿಸಿರುವ ಅರ್ಜಿ ನಮೂನೆ ಹಾಗೂ ಇತರೆ ಮಾಹಿತಿಗಳನ್ನು ರಾಜ ಭವನದ ವೆಬ್‌ಸೈಟ್ www.rajbhavan.kar.nic.in ಮಾರ್ಗವಾಗಿ ಪಡೆದು ನೇರವಾಗಿ ಅರ್ಜಿಯನ್ನು ರಾಜ್ಯಪಾಲರ ಪ್ರಧಾನ ಕಾರ್ಯದರ್ಶಿಗಳು, ರಾಜಭವನ, ಬೆಂಗಳೂರು–1 ಇವರಿಗೆ ದಿನಾಂಕ:30.06.2011ರ ಒಳಗಾಗಿ ಕಳುಹಿಸತಕ್ಕದ್ದು, ಸದರಿ ದಿನಾಂಕದ ನಂತರ ಸ್ವೀಕರಿಸುವ ಯಾವುದೇ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ. (ಅರ್ಜಿಯ ಲಕೋಟೆಯ ಮೇಲೆ ಹುದ್ದೆಯ ಹೆಸರನ್ನು ದಪ್ಪ ಅಕ್ಷರದಲ್ಲಿ ನಮೂದಿಸತಕ್ಕದ್ದು).

**2) ಅರ್ಜಿ ಶುಲ್ಕ:** 1) ಸಾಮಾನ್ಯ ಅರ್ಹತೆ, ಪ್ರವರ್ಗ 2(ಎ), 2(ಬಿ), 3(ಎ), 3(ಬಿ)ಗೆ ಸೇರಿದ ಅಭ್ಯರ್ಥಿಗಳಿಗೆ ರೂ.100/–

2) ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ, ಪ್ರವರ್ಗ–1 ಹಾಗೂ ಮಾಜಿ ಸೈನಿಕ ವಿಧವಾ ಅಭ್ಯರ್ಥಿಗಳಿಗೆ ರೂ.25/– ನಿಗದಿಪಡಿಸಿರುವ ಅರ್ಜಿ ಶುಲ್ಕವನ್ನು Indian Postal Order/ ಡಿ.ಡಿ. (DD) ಮೂಲಕ ರಾಜ್ಯಪಾಲರ ಪ್ರಧಾನ ಕಾರ್ಯದರ್ಶಿಗಳು, ರಾಜಭವನ, ಬೆಂಗಳೂರು–1 ರವರ ಹೆಸರಿಗೆ ಪಡೆದು ಅರ್ಜಿಯೊಂದಿಗೆ ಲಗತ್ತಿಸಿ ನಿಗದಿಪಡಿಸಿದ ಕೊನೆಯ ದಿನಾಂಕದ ಒಳಗೆ ಕಳುಹಿಸತಕ್ಕದ್ದು.

3) ಅಭ್ಯರ್ಥಿಗಳು ಅರ್ಜಿಯಲ್ಲಿರುವ ಎಲ್ಲಾ ಮಾಹಿತಿಗಳನ್ನು ಭರ್ತಿ ಮಾಡತಕ್ಕದ್ದು, ಅಪೂರ್ಣ ಅರ್ಜಿಯನ್ನು ತಿರಸ್ಕರಿಸಲಾಗುವುದು ಹಾಗೂ ತಪ್ಪು ಮಾಹಿತಿಗಳನ್ನು ಸಲ್ಲಿಸಿದ ಅರ್ಜಿದಾರರ ವಿರುದ್ಧ ಕಾನೂನಿನನ್ವಯ ಸೂಕ್ತ ಕ್ರಮಕೈಗೊಳ್ಳಲಾಗುವುದು. ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದ ನಂತರ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

**3) ಅರ್ಹತಾ ಷರತ್ತುಗಳು:**

(i) ಭಾರತೀಯ ನಾಗರೀಕನಾಗಿರತಕ್ಕದ್ದು.

(ii) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೇ ನೇಮಕಾತಿಗೆ ಅರ್ಹರಾಗುವುದಿಲ್ಲ.

(iii) ಅಭ್ಯರ್ಥಿಗಳು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯು ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

**4) ಶೈಕ್ಷಣಿಕ ವಿದ್ಯಾರ್ಹತೆ ಹಾಗೂ ಅನುಭವ:** ಪದವಿ ಪೂರ್ವ ಶಿಕ್ಷಣ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು. ಅಥವಾ ತತ್ಸಮಾನವಾದ ಶೈಕ್ಷಣಿಕ ವಿದ್ಯಾರ್ಹತೆ ಹೊಂದಿರಬೇಕು.

ಯಾವುದಾದರೂ ಸರ್ಕಾರಿ ಇಲಾಖೆಯ ಮನೆವಾರ್ತೆ ವಿಭಾಗದಲ್ಲಿ ಕನಿಷ್ಠ 3 ವರ್ಷಗಳ ಸೇವೆ ಸಲ್ಲಿಸಿರಬೇಕು.

**5) ಹುದ್ದೆಯ ವರ್ಗೀಕರಣ:** ಸಾಮಾನ್ಯ ಅಭ್ಯರ್ಥಿ

**6) ವೇತನ ಶ್ರೇಣಿ:** ರೂ.10000–250–10500–300–12300–350–14400–400–16800–450–18150.

ಪಿಂಚಣಿ ಸೌಲಭ್ಯ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ (ಎಸ್‌ಪಿಎಲ್) 04 ಪಿಇಟಿ 2005 ದಿನಾಂಕ:31.03.2006ರಂತೆ.

**7) ವಯೋಮಿತಿ:** ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು

(ಅ) ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

(ಆ) ಗರಿಷ್ಠ ವಯೋಮಿತಿ:

ಸಾಮಾನ್ಯ ವರ್ಗ – 35 ವರ್ಷ

2ಎ, 2ಬಿ, 3ಎ, 3ಬಿ – 38 ವರ್ಷ

ಪರಿಶಿಷ್ಟಜಾತಿ/ ಪರಿಶಿಷ್ಟ ಪಂಗಡ/ ಪ್ರವರ್ಗ–1 ವಿಧವೆ–40 ವರ್ಷ

ಸೇವೆಯಲ್ಲಿರುವ ಅಭ್ಯರ್ಥಿಗಳು ಅವರು ಸೇವೆಯಲ್ಲಿರುವ ಬಗ್ಗೆ ಅರ್ಜಿಯಲ್ಲಿನ ನಿಗದಿತ ಅಂಕಣವನ್ನು ತುಂಬತಕ್ಕದ್ದು ಹಾಗೂ ಅವರ ಸೇವಾ ಪ್ರಮಾಣಪತ್ರ ಮತ್ತು ಸದರಿ ಹುದ್ದೆಗೆ ಅರ್ಜಿ ಸಲ್ಲಿಸುವ ಬಗ್ಗೆ ನಿರಪೇಕ್ಷಣಾ ಪ್ರಮಾಣ ಪತ್ರವನ್ನು (N.O.C.) ಸಂಬಂಧಿತ ನೇಮಕಾತಿ ಪ್ರಾಧಿಕಾರದಿಂದ ದಿನಾಂಕ:30.06.2011 ಒಳಗೆ ಪಡೆದ ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

ಅಭ್ಯರ್ಥಿಗಳ ಜನ್ಮ ದಿನಾಂಕವನ್ನು ಅವರ ಎಸ್.ಎಸ್.ಎಲ್.ಸಿ. (S.S.L.C.) ಅಥವಾ ತತ್ಸಮಾನ ವಿದ್ಯಾರ್ಹತೆಯ ಪ್ರಮಾಣ ಪತ್ರ, ವರ್ಗಾವಣೆ ಪ್ರಮಾಣ ಪತ್ರ (ಟಿ.ಸಿ.), ಕ್ಯೂಮುಲೇಟಿವ್ ರೆಕಾರ್ಡ್‌ನಲ್ಲಿ ನಮೂದಿಸಿರುವಂತೆ ಮಾತ್ರ ಪರಿಗಣಿಸಲಾಗುವುದು.

**ಈ ಮುಂದಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಠ ವಯೋಮಿತಿಯನ್ನು ಈ ಕೆಳಗೆ ತಿಳಿಸಿರುವಷ್ಟರ ಮಟ್ಟಿಗೆ ಹೆಚ್ಚಿಸಲಾಗುವುದು.**

- ➢ ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ ಗರಿಷ್ಟ ವಯೋಮಿತಿಯನ್ನು ಅವನು/ ಅವಳು ಎಷ್ಟು ವರ್ಷಗಳ ಅವಧಿಗೆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.
- ➢ ಅಭ್ಯರ್ಥಿಯು ಕರ್ನಾಟಕ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಈಗ ಹುದ್ದೆಯನ್ನು ಹೊಂದಿದ್ದರೆ ಅಥವಾ ಹಿಂದೆ ಹೊಂದಿದ್ದ ಪಕ್ಷದಲ್ಲಿ ಗರಿಷ್ಟ ವಯೋಮಿತಿಯನ್ನು ಅಭ್ಯರ್ಥಿಯು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದಾರೋ ಅಷ್ಟು ವರ್ಷಗಳ ಅಥವಾ ಐದು ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.
- ➢ ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವನು ಸಶಸ್ತ್ರದಳಗಳಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಆ ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.

**ವಿವರಣೆ:** (ಎ) ಮಾಜಿ ಸೈನಿಕ ಎಂದರೆ ಸಶಸ್ತ್ರದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯುದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಯೋಧರಲ್ಲದ ಹುದ್ದೆಗಳಲ್ಲಿ) ಸೇವೆ ಸಲ್ಲಿಸಿದ ವ್ಯಕ್ತಿ, ಆದರೆ ಡಿಫೆನ್ಸ್ ಸೆಕ್ಯುರಿಟಿಕೋರ್, ಜನರಲ್ ರಿಸರ್ವ್ ಇಂಜಿನೀಯರಿಂಗ್ ಫೋರ್ಸ್, ಲೋಕಸಹಾಯಕ ಸೇನಾ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಸೇರ್ಪಡೆಯಾಗುವುದಿಲ್ಲ ಮತ್ತು (ಬಿ) ಕೇಂದ್ರ ಸಶಸ್ತ್ರದಳಗಳಲ್ಲಿ ಸೇವೆ ಸಲ್ಲಿಸುವಾಗ ಹತರಾದ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು (ಸಂದರ್ಭಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು) ಮಾಜಿ ಸೈನಿಕ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಆದರೆ ಅಂತಹವರುಗಳಿಗೆ ವಯೋಮಿತಿ ಸಡಿಲಿಕೆಯನ್ನು ನೀಡಲಾಗುವುದಿಲ್ಲ.

(ಬಿ) ಮೇಲ್ಕಂಡ ದಳದ ಸೇನೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ

ಅಥವಾ

(ಆ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಯಿಂದ ಬಿಡುಗಡೆಯಾದ ಅಥವಾ ವ್ಯಕ್ತಿಯಯಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಮರ್ಥ್ಯದ ಪಿಂಚಣಿ ಪಡೆದು ಸೇವೆಯಲ್ಲಿ ಬಿಡುಗಡೆಯಾದವನು.

ಅಥವಾ

(ಇ) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇನೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

(ಈ) ತನ್ನ ಸ್ವಂತ ಕೋರಿಕೆ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದು ಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ದಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿಯವರು.

1) ನಿರಂತರ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ ಪಿಂಚಣಿದಾರರು.

2) ಮಿಲಿಟರಿ ಸೇವೆಯಿಂದಾಗಿ ಉಂಟಾದ ದೈಹಿಕ ಅಸಾಮರ್ಥ್ಯತೆ ಹೊಂದಿ ಬಿಡುಗಡೆಯಾದ ವ್ಯಕ್ತಿ.

3) ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು.

ಈ ಮೇಲ್ಕಂಡ ವರ್ಗದ ಅಭ್ಯರ್ಥಿಗಳು ಮಾಜಿ ಸೈನಿಕ ಮೀಸಲಾತಿಗೆ ಅರ್ಹರಿರುತ್ತಾರೆ.

**ವಿವರಣೆ:** ಕೇಂದ್ರ ಸಶಸ್ತ್ರದಳದ ಸೇವೆಯಲ್ಲಿ ವೈಯಕ್ತಿಕ ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ, ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗಳಿಗೆ ನೇಮಕ ಹೊಂದುವಂತಿಲ್ಲ.

- ➢ ಅಭ್ಯರ್ಥಿಯು ನ್ಯಾಷನಲ್ ಕೆಡೆಟ್ ಕಾರ್ಪ್ಸ್‌ನಲ್ಲಿ ಪೂರ್ಣಕಾಲಿಕ ಪರಿವೀಕ್ಷಕರಾಗಿ ಸೇವೆ ಸಲ್ಲಿಸಿ ಬಿಡುಗಡೆಯಾಗಿರುವ ವ್ಯಕ್ತಿಯಾಗಿದ್ದರೆ ಅಂತಹ ಕ್ಯಾಡೆಟ್ ಪರಿವೀಕ್ಷಕನಾಗಿ ಸೇವೆ ಸಲ್ಲಿಸಿದಷ್ಟು ವರ್ಷಗಳು.

- ಅಭ್ಯರ್ಥಿಯು ರಾಜ್ಯ ಸರ್ಕಾರದಿಂದ ಪುರಸ್ಕೃತವಾದ ಗ್ರಾಮೀಣ ಔದ್ಯಮೀಕರಣ ಯೋಜನೆಯ ಮೇರೆಗೆ ನೇಮಕಗೊಂಡು ಗ್ರಾಮಸಮೂಹ ಪರಿಶೀಲಕರಾಗಿ ಈಗ ಕೆಲಸ ಮಾಡುತ್ತಿದ್ದರೆ, ಅಥವಾ ಹಿಂದೆಯಿದ್ದ ಪಕ್ಷದಲ್ಲಿ ಅಂತಹ ಗ್ರಾಮ ಸಮೂಹ ಪರಿಶೀಲಕರಾಗಿ ಸೇವೆ ಸಲ್ಲಿಸಿದಷ್ಟು ವರ್ಷಗಳು.
- ಅಭ್ಯರ್ಥಿಯು ವಿಧವೆಯಾಗಿದ್ದಲ್ಲಿ 10 ವರ್ಷಗಳು
- ಅಭ್ಯರ್ಥಿಯು ಜೀತಕಾರ್ಮಿಕನಾಗಿದ್ದ ಪಕ್ಷದಲ್ಲಿ 10 ವರ್ಷಗಳು ಜೀತ ಕಾರ್ಮಿಕನಾಗಿದ್ದ ಅಭ್ಯರ್ಥಿಯು ವಯೋಮಿತಿ ಸಡಿಲಿಕೆ ಪಡೆಯಲು ಸದರಿ ಅಧಿನಿಯಮ ಅಥವಾ 1957 ಕರ್ನಾಟಕ ಜೀತಕಾರ್ಮಿಕ ಪದ್ಧತಿ (ರದ್ಧಿಯಾತಿ) ಆದೇಶದ ಮೇರೆಗೆ ಜೀತ ಸಾಲವನ್ನು ಸಂದಾಯ ಮಾಡುವ ಹೊಣೆಯಿಂದ ಬಿಡುಗಡೆಯಾಗಿದ್ದಾನೆಂದು ಪ್ರಮಾಣ ಪತ್ರವನ್ನು ಜಿಲ್ಲಾ ಮ್ಯಾಜಿಸ್ಟ್ರೇಟ್‌ರಿಂದ ಪಡೆದಿಟ್ಟುಕೊಂಡಿರತಕ್ಕದ್ದು.

  * ಅಂಗವಿಕಲ ಅಭ್ಯರ್ಥಿಗಳಿಗೆ 10 ವರ್ಷಗಳು.

**ನೇಮಕಾತಿ ವಿಧಾನ:** ಮೌಖಿಕ ಪರೀಕ್ಷೆಯಲ್ಲಿ ಪಡೆದ ಅಂಕಗಳ ಆಧಾರದ ಮೇಲೆ ನೇಮಕಾತಿ ಮಾಡಲಾಗುವುದು.

**9) ಕಡ್ಡಾಯವಾಗಿ ಹಾಜರುಪಡಿಸಬೇಕಾದ ಪ್ರಮಾಣ ಪತ್ರಗಳು:**

(ಅ) ವ್ಯವಸ್ಥಾಪಕರ ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆಯಾದ ಪದವಿ ಪೂರ್ವ ಪರೀಕ್ಷೆಯ ಪ್ರಮಾಣ ಪತ್ರಗಳು ಅಥವಾ ತತ್ಸಮಾನ ವಿದ್ಯಾರ್ಹತೆಯ ಅಂಕಪಟ್ಟಿಗಳು.

(ಆ) ಜನ್ಮ ದಿನಾಂಕವನ್ನು ಖಚಿತಪಡಿಸಲು ಸೂಕ್ತ ದಾಖಲೆಗಳಾದ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಅಂಕಪಟ್ಟಿ/ ಕ್ಯೂಮಲೇಟಿವ್ ರೆಕಾರ್ಡ್.

(ಇ) ಮೀಸಲಾತಿ ಪ್ರಮಾಣ ಪತ್ರಗಳು–ಎಲ್ಲಿ ಅನ್ವಯಿಸುವುದು (Where applicable)

(ಈ) ಸೈನಿಕ ಸೇವೆಯಿಂದ ಬಿಡುಗಡೆಯಾದ/ ಮುಕ್ತಿಹೊಂದಿದ ಬಗ್ಗೆಗಿನ ಪ್ರಮಾಣ ಪತ್ರ– ಎಲ್ಲಿ ಅನ್ವಯಿಸುವುದು (Where applicable)

(ಉ) ಸರ್ಕಾರಿ ಇಲಾಖೆಯ ಮನೆವಾರ್ತೆ ವಿಭಾಗದಲ್ಲಿ ಅನುಭವ ಹೊಂದಿರುವ ಬಗ್ಗೆ ಸೂಕ್ತ ದಾಖಲಾತಿಗಳು.

**10. ಅಂಗವಿಕಲ ಅಭ್ಯರ್ಥಿ:**

ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 50 ಎಸ್‌ಆರ್‌ಆರ್ 2000, ದಿನಾಂಕ:03.09.2005 ರಲ್ಲಿ ಅಂಗವಿಕಲರೆಂದು ಗುರುತಿಸಿರುವ ಕ್ರಮಸಂಖ್ಯೆ: iii ರಿಂದ vii ರವರೆಗಿನ (Leprosy cured, Hearing impairment, Locomotor disability, Mental retardation & Mental illness) ನ್ಯೂನ್ಯತೆಯಲ್ಲಿ ಶೇ.40ಕ್ಕೆ ಕಡಿಮೆ ಇಲ್ಲದಂತೆ ಬಳಲುತ್ತಿರುವ ವ್ಯಕ್ತಿಗಳು.

ಅಂಗವಿಕಲರಿಗೆ ಮೀಸಲಿರಿಸಿದ ಹುದ್ದೆಗಳನ್ನು ಕೋರುವ ಅಭ್ಯರ್ಥಿಗಳು ವೈದ್ಯಕೀಯ ಪ್ರಮಾಣ ಪತ್ರವನ್ನು ದಿನಾಂಕ:19.11.2005ರ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 115 ಸೆನೆನಿ 2005 ರಲ್ಲಿ ನಿಗದಿಪಡಿಸಿದ ನಮೂನೆಯಲ್ಲಿ, ಅಂಗವಿಕಲತೆಯ ಬಗ್ಗೆ ಜಿಲ್ಲಾಮಟ್ಟದ ವೈದ್ಯಕೀಯ ಮಂಡಳಿಯಿಂದ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು. ಇತರೆ ಯಾವುದೇ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಪಡೆಯಲಾಗಿರುವ ಪ್ರಮಾಣ ಪತ್ರಗಳನ್ನು ಪರಿಗಣಿಸುವುದಿಲ್ಲ.

ಈ ಅಂಗವಿಕಲ ಮೀಸಲಾತಿಯಡಿ ಆಯ್ಕೆ ಹೊಂದುವ ಅಭ್ಯರ್ಥಿಗಳು ಸಹ ಈ ನ್ಯೂನ್ಯತೆಯನ್ನು ಹೊಂದಿದ್ದರೂ ಸದರಿ ಹುದ್ದೆಯ ಕರ್ತವ್ಯ ನಿರ್ವಹಣೆಗೆ ಅಡ್ಡಿ ಉಂಟಾಗದೆಂದು ತಿಳಿಸುವ ಅರ್ಹತೆಯ ಪ್ರಮಾಣ ಪತ್ರವನ್ನು ಕರ್ತವ್ಯಕ್ಕೆ ಸೇರುವ ಮುನ್ನ ನೀಡಬೇಕಾಗುತ್ತದೆ.

(ಅಂಧತ್ವ ಹಾಗೂ ಕಡಿಮೆ ದೃಷ್ಟಿ ಹೊಂದಿರುವ ಕಾರಣದ ಮೇರೆಗೆ ಅಂಗವಿಕಲ ಮೀಸಲಾತಿ ಕೋರುವ ಅಭ್ಯರ್ಥಿಗಳು ಈ ಹುದ್ದೆಗೆ ಅರ್ಜಿ ಸಲ್ಲಿಸಲು ಅರ್ಹರಲ್ಲ).

**V.S. JERE**

Under Secretary to Governor (ADM),

Raj Bhavan, Bangalore.

**ಪ್ರಪತ್ರ–3**

**(ಸರ್ಕಾರಿ ನೌಕರರ ಉಪಯೋಗಕ್ಕಾಗಿ ಮಾತ್ರ)**

**ಸರ್ಕಾರಿ ನೌಕರರು ಸಂಬಂಧಿಸಿದ ನೇಮಕಾತಿ ಪ್ರಾಧಿಕಾರದಿಂದ ಒದಗಿಸುವ ನಿರಾಕ್ಷೇಪಣಾ ಪ್ರಮಾಣ ಪತ್ರ**

ಶ್ರೀ/ ಶ್ರೀಮತಿ..........................................................................................ರವರು.......................................................................... ಸರ್ಕಾರದ.........................................................................ಇಲಾಖೆಯಲ್ಲಿ...................................................................ರಾಗಿ (ಪದನಾಮ) ಖಾಯಂ ಹುದ್ದೆಯನ್ನು.........................................ದಿನಾಂಕದಿಂದ........................... ದಿನಾಂಕದವರೆಗೆ ಕ್ರಮಬದ್ಧವಾಗಿ ನೇಮಕ ಹೊಂದಿರುತ್ತಾರೆಂದು ಪ್ರಮಾಣೀಕರಿಸುತ್ತೇನೆ. ಇವರು ಉದ್ದೇಶಿತ ಹುದ್ದೆಗೆ ಅರ್ಜಿ ಸಲ್ಲಿಸಲು ಅನುಮತಿಸಲಾಗಿದೆ ಮತ್ತು ಇವರ ವೇತನಶ್ರೇಣಿ ರೂ................ರಲ್ಲಿ ಒಟ್ಟಾರೆ.............................ಮಾಸಿಕ ವರಮಾನ ಪಡೆಯುತ್ತಿದ್ದಾರೆ.

ಸ್ಥಳ: ಸಹಿ:

ದಿನಾಂಕ: ಪದನಾಮ:

ಇಲಾಖಾ ಮೊಹರು:

**ಪ್ರಪತ್ರ–4**

**(ಪ್ರವರ್ಗ–1ಕ್ಕೆ ಸೇರಿದ ಅಭ್ಯರ್ಥಿಗಳಿಗೆ ಮಾತ್ರ)**

**ನಮೂನೆ–ಇ**

**(ನಿಯಮ 3ಎ(2)(3) ನೋಡಿ)**

**ಹಿಂದುಳಿದ ವರ್ಗಗಳಿಗೆ (ಪ್ರವರ್ಗ–1) ಸೇರಿದ ಅಭ್ಯರ್ಥಿಗೆ ನೀಡುವ ಪ್ರಮಾಣ ಪತ್ರ**

................................ಗ್ರಾಮ/ ಪಟ್ಟಣದ/ ನಗರ ನಿವಾಸಿಯಾದ............................ಶ್ರೀ/ಶ್ರೀಮತಿ.......................................................................... ಇವರ ಮಗ/ ಮಗಳು/ ಪತ್ನಿ/ ಪತಿಯಾದ ಶ್ರೀ/ಶ್ರೀಮತಿ.......................................................ಇವರು ಹಿಂದುಳಿದ ವರ್ಗಗಳ (ಪ್ರವರ್ಗ).................. ಜಾತಿಯ.......................................ಉಪ ಜಾತಿಗೆ ಸೇರಿರುತ್ತಾರೆಂದು ಪ್ರಮಾಣೀಕರಿಸಲಾಗಿದೆ.

ಸ್ಥಳ
ದಿನಾಂಕ:

ತಹಶೀಲ್ದಾರರು,
...................ತಾಲ್ಲೂಕು
ಕಛೇರಿಯ ಮೊಹರು

**ಪ್ರಪತ್ರ–5**

**(ಪ್ರವರ್ಗ–2ಎ, 2ಬಿ, 3ಎ, 3ಬಿ ಗೆ ಸೇರಿದ ಅಭ್ಯರ್ಥಿಗಳಿಗೆ ಮಾತ್ರ)**

**ನಮೂನೆ–ಎಫ್**

**(ನಿಯಮ 3ಎ (2)(3) ನೋಡಿ)**

**ಹಿಂದುಳಿದ ವರ್ಗಗಳಿಗೆ (2ಎ, 2ಬಿ, 3ಎ, 3ಬಿ) ಸೇರಿದ ಅಭ್ಯರ್ಥಿಗೆ ನೀಡುವ ಆದಾಯ ಮತ್ತು ಜಾತಿ ಪ್ರಮಾಣ ಪತ್ರ**

.............................................ರಲ್ಲಿ ವಾಸವಾಗಿರುವ ಶ್ರೀ/ಶ್ರೀಮತಿ.............................................ಇವರ ಮಗ/ಮಗಳು/ಪತಿ/ ಪತ್ನಿಯಾದ ಶ್ರೀ/ಶ್ರೀಮತಿ/ ಕುಮಾರಿ...........................................ಇವರು ಮತ್ತು ಆತನ/ ಅವಳ ತಂದೆ/ತಾಯಿ/ ಪೋಷಕರು/ ಪತ್ನಿ/ ಪತಿಯು ಸರ್ಕಾರಿ ಆದೇಶಗಳ ಸಂಖ್ಯೆ: ಎಸ್‌ಡಬ್ಲ್ಯೂಡಿ 225 ಬಿಸಿಎ 2000, ದಿನಾಂಕ:30.03.2002ರಲ್ಲಿ ನಿರ್ದಿಷ್ಟಪಡಿಸಿದ ಮೇಲುಸ್ತರದ (ಕ್ರಿಮಿ ಲೇಯರ್) ವ್ಯಾಪ್ತಿಯಲ್ಲಿ ಬರುವುದಿಲ್ಲವೆಂದು:

ಅಭ್ಯರ್ಥಿಯಾಗಲಿ ಅಥವಾ ಆತನ/ ಆಕೆಯ ತಂದೆ ತಾಯಿ) ಪೋಷಕರಾಗಲಿ/ ಪತ್ನಿ/ ಪತಿಯಾಗಲಿ ಸರ್ಕಾರದ ಸೇವೆಯಲ್ಲಿ 1ನೇ ದರ್ಜೆಯ ಅಥವಾ 2 ದರ್ಜೆಯ ಅಧಿಕಾರಿಯಾಗಿಲ್ಲವೆಂದು

ಅಥವಾ

ಸಾರ್ವಜನಿಕ ವಲಯ ಉದ್ಯಮದಲ್ಲಿ ತತ್ಸಮಾನವಾದ ಹುದ್ದೆಯನ್ನು ಹೊಂದಿರುವುದಿಲ್ಲ.

ಅಥವಾ

ಖಾಸಗಿ ನಿಯೋಜಕರ ಕೈಕೆಳಗೆ, 2ನೇ ದರ್ಜೆಯ ಅಧಿಕಾರಿಯ ಸಂಬಳಕ್ಕಿಂತ (ವೇತನ ಶ್ರೇಣಿ ರೂ.6000–11200/– ಪ್ರಾರಂಭಿಕ ಹಂತ) ಕಡಿಮೆಯಿಲ್ಲದ ಸಂಬಳವನ್ನು ಪಡೆಯುವ ನೌಕರನಾಗಿಲ್ಲವೆಂದೂ

ಅಥವಾ

ಆತನ/ಆಕೆಯ ತಂದೆ ತಾಯಿ/ ಪೋಷಕರು/ ಪತ್ನಿ/ಪತಿಯ ಆದಾಯವು ಎರಡು ಲಕ್ಷ ಮೀರುವುದಿಲ್ಲವೆಂದು.

ಅಥವಾ

ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961ರಲ್ಲಿ ನಿಗದಿಪಡಿಸಿರುವಂತೆ ಆತನ/ ಆಕೆಯ ತಂದೆ/ ತಾಯಿ/ ಪೋಷಕರು/ ಪತ್ನಿ/ ಪತಿಯು 10 ಯುನಿಟ್‌ಗಿಂತ ಹೆಚ್ಚಿನ ಕೃಷಿ ಭೂಮಿ ಅಥವಾ 20 ಎಕರೆಗಳಿಗಿಂತ ಹೆಚ್ಚಿನ ಪ್ಲಾಂಟೇಶನ್ ಭೂಮಿಯನ್ನು ಹೊಂದಿರುವುದಿಲ್ಲವೆಂದು ಪ್ರಮಾಣೀಕರಿಸಲಾಗಿದೆ.

ಸರ್ಕಾರಿ ಆದೇಶ ಸಂಖ್ಯೆ: ಎಸ್.ಡಬ್ಲ್ಯೂಡಿ 225 ಬಿಸಿಎ 2000, ದಿನಾಂಕ:30.03.2002 ರನ್ವಯ ಶ್ರೀ/ಶ್ರೀಮತಿ/ಕುಮಾರಿ............................ ಇವರು....................................ಜಾತಿಗೆ ಸೇರಿದ................................ಉಪ ಜಾತಿಯವರಾಗಿದ್ದು ಸರ್ಕಾರಿ ಆದೇಶ ಸಂಖ್ಯೆ: ಎಸ್.ಡಬ್ಲ್ಯೂಡಿ 225 ಬಿಸಿಎ 2000, ದಿನಾಂಕ:30.03.2002ರನ್ವಯ ಹಿಂದುಳಿದ ವರ್ಗಗಳ ಪ್ರವರ್ಗ..............(2ಎ, 2ಬಿ, 3ಎ, 3ಬಿ) ಸೇರಿರುತ್ತಾರೆ.

ಸ್ಥಳ:
ದಿನಾಂಕ:

ತಹಶೀಲ್ದಾರರು
.....................ತಾಲ್ಲೂಕು
ಕಛೇರಿಯ ಮೊಹರು.

**ಪ್ರಪತ್ರ–6**

**(ಪ.ಜಾ/ಪ.ಪಂಕ್ಕೆ ಸೇರಿದ ಅಭ್ಯರ್ಥಿಗಳಿಗೆ ಮಾತ್ರ)**

**ನಮೂನೆ–ಡಿ**

**(ನಿಯಮ 3ಎ (2)(3) ನೋಡಿ)**

**ಅನುಸೂಚಿತ ಜಾತಿ ಅಥವಾ ಅನುಸೂಚಿತ ಬುಡಕಟ್ಟುಗಳಿಗೆ (ಪ.ಜಾ/ಪ.ಪಂ) ಸೇರಿದ ಅಭ್ಯರ್ಥಿಗಳಿಗೆ ನೀಡುವ ಪ್ರಮಾಣ ಪತ್ರಗಳ ನಮೂನೆ**

**ಪ್ರಮಾಣ ಪತ್ರ**

.......................................ರಾಜ್ಯದ/ ಕೇಂದ್ರಾಡಳಿತ ಪ್ರದೇಶದ............................ಜಿಲ್ಲೆಯ/ ವಿಭಾಗದ.......................ಗ್ರಾಮ/ ಪಟ್ಟಣದ * ನಿವಾಸಿಯಾದ ಶ್ರೀ/ಶ್ರೀಮತಿ.......................................ಎಂಬುವವರ ಮಗ/ ಮಗಳಾದ ಶ್ರೀ/ಶ್ರೀಮತಿ..........................ಇವರು ಅನುಸೂಚಿತ ಜಾತಿ/ ಅನುಸೂಚಿತ ಬುಡಕಟ್ಟು * ಎಂದು ಮಾನ್ಯ ಮಾಡಲಾಗಿರುವ ಜಾತಿ/ ಬುಡಕಟ್ಟಿಗೆ * ಸೇರಿರುತ್ತಾರೆಂದು ಪ್ರಮಾಣೀಕರಿಸಲಾಗಿದೆ.

* ಸಂವಿಧಾನ (ಅನುಸೂಚಿತ ಜಾತಿಗಳು) ಆದೇಶ, 1950

* ಸಂವಿಧಾನ (ಅನುಸೂಚಿತ ಬುಡಕಟ್ಟುಗಳು) ಆದೇಶ, 1950

* ಸಂವಿಧಾನ (ಅನುಸೂಚಿತ ಜಾತಿ) (ಕೇಂದ್ರಾಡಳಿತ ಪ್ರದೇಶಗಳು) ಆದೇಶ, 1950.

* ಸಂವಿಧಾನ (ಅನುಸೂಚಿತ ಬುಡಕಟ್ಟುಗಳು) (ಕೇಂದ್ರಾಡಳಿತ ಪ್ರದೇಶಗಳು) ಆದೇಶ, 1951.

(ಅನುಸೂಚಿತ ಜಾತಿ ಮತ್ತು ಅನುಸೂಚಿತ ಬುಡಕಟ್ಟುಗಳ ಪಟ್ಟಿ (ಮಾರ್ಪಾಡು) ಆದೇಶ 1956, ಮುಂಬಯಿ ರಾಜ್ಯ ಪುನರ್ ರಚನಾ ಅಧಿನಿಯಮ, 1960, ಪಂಜಾಬ್ ರಾಜ್ಯ ಪುನರ್ ರಚನಾ ಅಧಿನಿಯಮ, 1966, ಹಿಮಾಚಲ ಪ್ರದೇಶ ರಾಜ್ಯ ಅಧಿನಿಯಮ 1970 ಮತ್ತು ಈಶಾನ್ಯ ಪ್ರದೇಶಗಳ ಪುನರ್ ರಚನಾ ಅಧಿನಿಯಮ, 1971ರ ಮೂಲಕ ತಿದ್ದುಪಡಿಯಾದಂತೆ).

* ಸಂವಿಧಾನ

* ಸಂವಿಧಾನ (ಜಮ್ಮು ಮತ್ತು ಕಾಶ್ಮೀರಾ) ಅನುಸೂಚಿತ ಜಾತಿಗಳ ಆದೇಶ 1956

* ಅನುಸೂಚಿತ ಜಾತಿ ಮತ್ತು ಅನುಸೂಚಿತ ಬುಡಕಟ್ಟುಗಳ (ತಿದ್ದುಪಡಿ) ಅಧಿನಿಯಮ, 1976ರ ಮೂಲಕ ತಿದ್ದುಪಡಿಯಾದಂತೆ ಸಂವಿಧಾನ (ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳ) ಅನುಸೂಚಿತ ಬುಡಕಟ್ಟುಗಳ ಆದೇಶ, 1959.

* ಸಂವಿಧಾನ (ದಾದರ್ ಮತ್ತು ನಗರ ಹವೇಲಿ) ಅನುಸೂಚಿತ ಜಾತಿಗಳ ಆದೇಶ 1962.

* ಸಂವಿಧಾನ (ಪಾಂಡಿಚೇರಿ) ಅನುಸೂಚಿತ ಜಾತಿಗಳ ಆದೇಶ 1964.

* ಸಂವಿಧಾನ (ಅನುಸೂಚಿತ ಬುಡಕಟ್ಟುಗಳ) (ಉತ್ತರ ಪ್ರದೇಶ) ಆದೇಶ 1967.

* ಸಂವಿಧಾನ (ಗೋವಾ, ದಮನ್ ಮತ್ತು ದೀವ್) ಅನುಸೂಚಿತ ಜಾತಿ/ ಬುಡಕಟ್ಟುಗಳ ಆದೇಶ 1988.

* ಸಂವಿಧಾನ (ನಾಗಾಲ್ಯಾಂಡ್) ಅನುಸೂಚಿತ ಬುಡಕಟ್ಟುಗಳ ಆದೇಶ.

2. ಶ್ರೀ/ಶ್ರೀಮತಿ/ ಕುಮಾರಿ........................ಮತ್ತು/ ಅಥವಾ ಅವನ*/ಅವಳ* ಕುಟುಂಬವು..............................ರಾಜ್ಯ/ ಕೇಂದ್ರಾಡಳಿತ ಪ್ರದೇಶದ...........................ಜಿಲ್ಲಾ/ ವಿಭಾಗದ.....................ಗ್ರಾಮ/ಪಟ್ಟಣದ ಸಾಮಾನ್ಯ ನಿವಾಸಿಗಳು.

ಸ್ಥಳ: ಸಹಿ........................

ದಿನಾಂಕ: ತಹಶೀಲ್ದಾರ್....................

ಪದನಾಮ

ಕಛೇರಿ ಮೊಹರಿನೊಂದಿಗೆ

**ಪ್ರಪತ್ರ–7**

**(ಕನ್ನಡ ಮಾಧ್ಯಮ ವ್ಯಾಸಂಗ ಪ್ರಮಾಣ ಪತ್ರ)**

ಶ್ರೀ/ಶ್ರೀಮತಿ...........................................................................ರವರ ಮಗ/ ಮಗಳು/ ಪತ್ನಿ/ ಶ್ರೀಮತಿ/ ಕುಮಾರಿ................ಜಿಲ್ಲೆ.......... ತಾಲ್ಲೂಕು.........................ಗ್ರಾಮದಲ್ಲಿ ವಾಸವಾಗಿರುವ ಇವರು ......................................ನೇ ತರಗತಿಯಿಂದ..............................ನೇ ತರಗತಿಯವರೆಗೆ..................................................ಶೈಕ್ಷಣಿಕ ವರ್ಷದಿಂದ.................................ಶೈಕ್ಷಣಿಕ ವರ್ಷದವರೆಗೆ..........................ಶಾಲೆಯಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುತ್ತಾರೆಂದು ಪ್ರಮಾಣೀಕರಿಸಲಾಗಿದೆ.

ಸ್ಥಳ: ಮುಖ್ಯೋಪಾಧ್ಯಾಯರ ಸಹಿ.

ದಿನಾಂಕ: ಮತ್ತು ಸಂಸ್ಥೆಯ ಮೊಹರು:

**ಪ್ರಪತ್ರ–8**

**ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 44 ಸೇನೆನಿ 2001, ದಿನಾಂಕ:27.07.2001**

**ನಮೂನೆ–3**

**ಯೋಜನೆಗಳಿಂದ ನಿರ್ವಸಿತರಾದ ಕುಟುಂಬದ ಅಭ್ಯರ್ಥಿ**

ಶ್ರೀ/ಶ್ರೀಮತಿ...................................................ಎಂಬುವವರ ಮಗ/ಮಗಳು/ಪತಿ/ಪತ್ನಿ ಶ್ರೀ/ಶ್ರೀಮತಿ/ ಕುಮಾರಿ........................ಜಿಲ್ಲೆ................ ತಾಲ್ಲೂಕು..................................ಗ್ರಾಮದಲ್ಲಿ..............................ವಾಸವಾಗಿರುವ ಇವರು: ಇವರ ಕುಟುಂಬದವರ ಅವಲಂಬಿತರಾಗಿದ್ದ ಈ ಕೆಳಕಂಡ ಆಸ್ತಿಯನ್ನು..................................ಯೋಜನೆಗಾಗಿ.................................ಇಸವಿಯಲ್ಲಿ ಸ್ವಾಧೀನಪಡಿಸಿಕೊಳ್ಳಲಾಗಿದೆ ಎಂದು ಈ ಮೂಲಕ ಪ್ರಮಾಣೀಕರಿಸಿದೆ:

(ಅ) ** ವಾಸಿಸುವ ಮನೆ ಮತ್ತು ತಾವು ಅವಲಂಬಿತರಾಗಿದ್ದ ಅವರ ಕೃಷಿ ಭೂಮಿಯ ಅರ್ಧದಷ್ಟು

(ಆ) ** ಯೋಜನೆಗೆ ಮೊದಲು ಭೂಮಿಯನ್ನು ಹೊಂದಿರದೆ: ಯೋಜನೆಯಿಂದ ತಾವು ವಾಸಿಸುವ ಮನೆ:

(ಇ) ** ತಾವು ಅವಲಂಬಿತರಾಗಿದ್ದ ತಮ್ಮ ಕೃಷಿ ಭೂಮಿಯ ಅರ್ಧದಷ್ಟು ಅಥವಾ ಅದಕ್ಕಿಂತ ಕಡಿಮೆ ಕೃಷಿ ಭೂಮಿ:

(ಈ) ** ಇತರ ಇನ್ನಾವುದೇ ಪ್ರಕರಣದಲ್ಲಿ ಯೋಜನೆಯಿಂದ ನಿರ್ವಸಿತರಾದವರು.

ಸ್ಥಳ: ತಹಶೀಲ್ದಾರರು

ದಿನಾಂಕ: ....................ತಾಲ್ಲೂಕು

ಕಛೇರಿಯ ಮೊಹರು.

ಪ್ರಪತ್ರ–9

**ಕರ್ನಾಟಕ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 115 ಸೇನೆನಿ 2005, ದಿನಾಂಕ:19.11.2005**

**CERTIFICATE FOR THE PERSONS WITH DISABILITIES**

This is to certify that Sri/ Smt/ Kum______________________________________son/ wife/daughter of Shri___________ Age__________________old, male/ female. Registration No.____________________ is a case of________________He/She is physically disabled/ visual disabled/ speech & hearing disabled and has______________% (____________ Percent) Permanent (physical impairment. visual impairment, speech & hearing impairment) in relation to his/her________________________

**Note:**

1. This conditions is progressive/ non-progressive/ likely to improve/ not likely to improve.*
2. Re-assessment is not recommended/ is recommended after a period of _________ months/ years.*

- Strike out which is not applicable.

(Recent Attested
Photograph showing
The disability
Affixed here)

| | | |
|---|---|---|
| Sd/- | Sd/- | Sd/- |
| (Doctor) | (Doctor) | (Doctor) |
| (Seal) | (Seal) | (Seal) |

Countersigned by the
Medical Superintendent CMO/
Head Of The Hospital (with seal)

Signature/ Thumb impression
Of the disabled person.

ಪಿ.ಆರ್.210

**ಪೌರಾಡಳಿತ ನಿರ್ದೇಶನಾಲಯ**

**9ನೇ ಮಹಡಿ, ವಿಶ್ವೇಶ್ವರಯ್ಯ ಕೇಂದ್ರ, ಡಾ:ಬಿ.ಆರ್.ಅಂಬೇಡ್ಕರ್ ವೀಧಿ, ಬೆಂಗಳೂರು–1 ದಿ:31.05.2011**

ಈ ಕಛೇರಿಯ ಅಧಿಸೂಚನೆ ಸಂ:DMA/ADM/EST/CR37/2008-09 ದಿ:24.9.2009ನ್ನು ಮುಂದುವರೆಸುತ್ತಾ 4 ಪ್ರಥಮ ದರ್ಜೆ ಸಹಾಯಕರ ಹುದ್ದೆಗಳಿಗೆ ನಾಲ್ಕನೇ ತಾತ್ಕಾಲಿಕ ಆಯ್ಕೆಪಟ್ಟಿಯನ್ನು ಕರ್ನಾಟಕ ನಾಗರಿಕ ಸೇವಾ (ಸ್ಪರ್ಧಾತ್ಮಕ ಪರೀಕ್ಷೆಯ ಮೂಲಕ ನೇರನೇಮಕಾತಿ)(ಸಾಮಾನ್ಯ) ನಿಯಮಗಳು 2001ರಡಿ ಕಾಲಕಾಲಕ್ಕೆ ತಿದ್ದುಪಡಿ ಹೊಂದಿರುವ ನಿಯಮಗಳ ಆಧಾರದ ಮೇಲೆ ಸಿದ್ದಪಡಿಸಿ ಸಮಸಂಖ್ಯೆ ಅಧಿಸೂಚನೆಯನ್ನು ದಿನಾಂಕ:18.5.2011ರಲ್ಲಿ ಪ್ರಕಟಿಸಿ ಆಕ್ಷೇಪಣೆಗಳನ್ನು ಆಹ್ವಾನಿಸಿದ್ದು, ಪ್ರಕಟಣೆ ನೀಡಿದ 15 ದಿನಗಳ ಒಳಗೆ ಆಕ್ಷೇಪಣೆಗಳನ್ನು ಸಲ್ಲಿಸಲು ತಿಳಿಸಲಾಗಿತ್ತು. ಸ್ವೀಕೃತಗೊಂಡ ಆಕ್ಷೇಪಣೆಗಳನ್ನು ಪರಿಗಣಿಸಿದ್ದು ಅಂತಿಮವಾಗಿ **ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ** 03 ಅಭ್ಯರ್ಥಿಗಳ **ಆಯ್ಕೆಪಟ್ಟಿಯನ್ನು** ಸದರಿ ನಿಯಮ 6 ರಡಿ ತಯಾರಿಸಿ ಅಭ್ಯರ್ಥಿಗಳ ಮಾಹಿತಿಗಾಗಿ ಪ್ರಕಟಿಸಲಾಗಿದೆ.

ನೇಮಕಾತಿ ಪ್ರಾಧಿಕಾರ : **ಆಯುಕ್ತರು**

ಇಲಾಖೆಯ ಹೆಸರು : **ಪೌರಾಡಳಿತ ನಿರ್ದೇಶನಾಲಯ**

| ಕ್ರ. ಸಂ. | ಅಭ್ಯರ್ಥಿಯ ಹೆಸರು | ರೋಲ್ ಸಂಖ್ಯೆ | ಜನ್ಮ ದಿನಾಂಕ | ಪ್ರವರ್ಗ ಹಂಚಿಕೆ | ಪಡೆದ ಅಂಕಗಳು |
|---|---|---|---|---|---|
| 1 | ಹನುಮಂತಪ್ಪ ಜಿ. | ಎಲ್‌ಪಿ 502 | 01.06.1977 | ಪ.ಪಂ.–ಇತರೆ/ಪ.ಪಂ.–ಗ್ರಾ.ಅ.–ಕ.ಮಾ.ಅ. | 179 |
| 2 | ವಿಶ್ವನಾಥ ಜಿ.ಎನ್. | ಎಸ್‌ಎಸ್ 048 | 10.07.1981 | ಪ.ಜಾ–ಗ್ರಾ.ಅ./ಪ.ಜಾ.–ಗ್ರಾ.ಅ.–ಕ.ಮಾ.ಅ. | 177 |
| 3 | ಯಜ್ಞೇಶ್ವರ ಬಿ. | ಎಂಸಿ 115 | 01.07.1964 | 2ಎ–ಮಾ.ಯೋ./2ಎ–ಮಾ.ಯೋ.–ಗ್ರಾ.ಅ.–ಕ.ಮಾ.ಅ. | 117 |

ಆಯುಕ್ತರು
ಪೌರಾಡಳಿತ ನಿರ್ದೇಶನಾಲಯ,
ನಗರಾಭಿವೃದ್ಧಿ ಇಲಾಖೆ, ಬೆಂಗಳೂರು

**DIRECTORATE OF MUNICIPAL ADMINISTRATION**

**9TH floor, Visveswaraiah Towers, Dr.B.R Ambedkar Veedhi, Bangalore 560001**

**Dated : 31-05-2011**

In pursuance of this office notification No: DMA/ADM/EST/CR:37/08-09, Dated 24/09/2009, the Fourth provisional select list of candidates for 4 Posts Of FDA for urban Local Bodies of Directorate of Municipal Administration, prepared on the basis of Karnataka Civil Services (Direct Recruitment by Competitive Examinations) (General) Rules, 2001 as amended from time to time, was published vide Notification of even number dated 18-05-2011 inviting Objections, if any, from Candidates likely to be affected within 15 days of its publication. The Objections received have been considered and the Final Select List of 3 candidates is prepared under Rule (6) of the said rules and is hereby published for the information of the candidates. Appointing Authority : COMMISSIONER Name of the Department : Directorate of Municipal Administration

| Sl. No. | Name of Candidate | Roll No. | Date of Birth | Category allocation | MARKS |
|---|---|---|---|---|---|
| 1. | HANUMANTHAPPA G | LP502 | 01-06-1977 | ST-OTH/ST-RC-KMC | 179 |
| 2. | VISWANATHA G N | SS048 | 10-07-1981 | SC-RC/SC-RC-KMC | 177 |
| 3. | YAJNESHWARA B | MC115 | 01-07-1964 | IIA-EXM/IIA-EXM-RC-KMC | 117 |

Commissioner

PR-218

Directorate of Municipal Administration

Department of Urban Development, Bangalore

**ಪೌರಾಡಳಿತ ನಿರ್ದೇಶನಾಲಯ, 9ನೇ ಮಹಡಿ, ವಿಶ್ವೇಶ್ವರಯ್ಯ ಮುಖ್ಯ ಗೋಪುರ, ಡಾ:ಅಂಬೇಡ್ಕರ್ ವೀಧಿ,**

**ತಿದ್ದುಪಡಿ ಅಧಿಸೂಚನೆ**

**ಸಂ.ಪೌನಿ/ಅಕೌಂಟೆಂಟ್/ಸಿಆರ್/31/2010–11, ಬೆಂಗಳೂರು, ದಿನಾಂಕ 01.06.2011**

ಅಧಿಸೂಚನೆ ಸಮಸಂಖ್ಯೆ ದಿನಾಂಕ.29.7.2010ರಲ್ಲಿ ರಾಜ್ಯದ ನಗರ ಸ್ಥಳೀಯ ಸಂಸ್ಥೆಯಲ್ಲಿ ಖಾಲಿ ಇರುವ ಅಕೌಂಟೆಂಟ್ ಹುದ್ದೆಗಳಿಗೆ 81ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿಯನ್ನು ಪ್ರಕಟಿಸಲಾಗಿದ್ದು ಸದರಿ ಆಯ್ಕೆ ಪಟ್ಟಿಯಲ್ಲಿ ಕ್ರಮ ಸಂಖ್ಯೆ 53ರಲ್ಲಿನ ಅಭ್ಯರ್ಥಿಯಾದ ಗೀತಾಕುಂಬಾರಿ ಇವರ ಆಯ್ಕೆಗೆ ಸಂಬಂಧಿಸಿದ ವರ್ಗದ ಹಂಚಿಕೆಯನ್ನು III ಬಿ–ಮಅ–ಗ್ರಾಅ–ಕೆಎಂಸಿ ಎಂದಿರುವುದನ್ನು III ಬಿ–ಮಅ ಎಂದು ಈ ಕೆಳಕಂಡಂತೆ ಓದಿಕೊಳ್ಳತಕ್ಕದ್ದು.

| ಕ್ರ.ಸಂ. | ಅಭ್ಯರ್ಥಿಯ ಹೆಸರು | ರೋಲ್ ನಂ. | ಜನ್ಮ ದಿನಾಂಕ | ವರ್ಗದ ಹಂಚಿಕೆ | ಅಂಕಗಳಿಕೆ |
|---|---|---|---|---|---|
| 53 | ಗೀತಾಕುಂಬಾರಿ | ಎಬಿ260 | 8.5.1979 | III ಬಿ–ಮಅ | 113 |

ಆಯುಕ್ತರು

ಪೌರಾಡಳಿತ ನಿರ್ದೇಶನಾಲಯ, ಬೆಂಗಳೂರು.

**Directorate of Municipal Administration, 9th Floor, V.V.Towers, Dr.Ambedkar veedhi, Bangalore**

**CORRIGENDUM**

**No:DMA/Accountant/CR/31/2010-11, Date: 1.6.2011**

In the order dated 29th July 2010 related to vacant posts of Accountant in Urban Local Bodies, Final Selection List of 67 candidates were published. In the List candidate bearing serial no.53 Geeta kumbari selection category IIIB-WC-RC-KMC should be read as

| Sl. No. | Name of the Candidate | Roll.No | Date of Birth | Category Allocation | Marks Secured |
|---|---|---|---|---|---|
| 53 | Geeta kumbari | AB 260 | 8.5.1979 | IIIB-WC | 113 |

Commissioner

PR-219

Directorate of Municipal Administration,

Bangalore.

**ಕರ್ನಾಟಕ ಸರ್ಕಾರ**

**ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರ ಕಛೇರಿ, ಕರ್ನಾಟಕ ರಾಜ್ಯ, ನಂ.17, ಜಯನಿವಾಸ, ಶಂಕರಮಠ ರಸ್ತೆ, ಬಸವನಗುಡಿ, ಬೆಂಗಳೂರು–560 004**

**ಅಧಿಸೂಚನೆ ಸಂಖ್ಯೆ: ಸಿಬ್ಬಂದಿ–2/ನೇಮಕಾತಿ/18/2004–05, ದಿನಾಂಕ: 02–05–2011**

**ನೇಮಕಾತಿ ಅಧಿಸೂಚನೆ**

**ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಗೆ ಬ್ಯಾಕ್‌ಲಾಗ್ ಹುದ್ದೆಗಳಿಗೆ ವಿಶೇಷ ನೇಮಕಾತಿ**

ಈ ಇಲಾಖೆಯ ಸಮಸಂಖ್ಯೆ ಅಧಿಸೂಚನೆ ದಿನಾಂಕ 25.10.2010 ರನ್ವಯ ಶೀಘ್ರಲಿಪಿಗಾರರ ಬ್ಯಾಕ್‌ಲಾಗ್ ಹುದ್ದೆಗಳ ನೇಮಕಾತಿಗಾಗಿ ಸೂಕ್ತ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿತ್ತು. ಸ್ವೀಕೃತಿಯಾದ ಅರ್ಜಿಗಳನ್ನು ಪರಿಶೀಲಿಸಿ, 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಅರ್ಹ ಅಭ್ಯರ್ಥಿಗಳ ತಾತ್ಕಾಲಿಕ ಮುಖ್ಯ ಆಯ್ಕೆ ಪಟ್ಟಿ ಹಾಗೂ ಹೆಚ್ಚುವರಿ ಪಟ್ಟಿಯನ್ನು ಈ ಕಛೇರಿಯ ಇದೇ ಕ್ರಮಸಂಖ್ಯೆ ಅಧಿಸೂಚನೆ ದಿನಾಂಕ 11.03.2011 ರಲ್ಲಿ ಪ್ರಕಟಿಸಲಾಗಿತ್ತು ಹಾಗೂ ಈ ಆಯ್ಕೆಗೆ ಸಂಬಂಧಿಸಿದಂತೆ ಆಕ್ಷೇಪಣೆಗಳಿದ್ದಲ್ಲಿ, ಆಕ್ಷೇಪಣೆಗಳನ್ನು ಅಧಿಸೂಚನೆ ದಿನಾಂಕದಿಂದ 30 ದಿನಗಳೊಳಗಾಗಿ ಸಲ್ಲಿಸಲು ಸೂಚಿಸಲಾಗಿತ್ತು.

ಆಕ್ಷೇಪಣೆ ಸಲ್ಲಿಸಲು ನಿಗದಿಪಡಿಸಲಾದ ಕೊನೆಯ ದಿನಾಂಕವಾದ ದಿನಾಂಕ 11.04.2011 ರೊಳಗೆ ಯಾವುದೇ ಆಕ್ಷೇಪಣೆಗಳು ಸ್ವೀಕೃತವಾಗಿರುವುದಿಲ್ಲ. ಇದರಿಂದಾಗಿ ತಾತ್ಕಾಲಿಕ ಮುಖ್ಯ ಆಯ್ಕೆಪಟ್ಟಿ ಹಾಗೂ ಹೆಚ್ಚುವರಿ ಪಟ್ಟಿಯಲ್ಲಿನ ಅಭ್ಯರ್ಥಿಗಳಿಗಿಂತ ಹೆಚ್ಚಿನ ಶೇಕಡ ಅಂಕಗಳನ್ನು ಗಳಿಸಿ, ಅರ್ಹತೆ ಇರುವ ಯಾವುದೇ ಅಭ್ಯರ್ಥಿಗಳು ಇರುವುದಿಲ್ಲವೆಂದು ಪರಿಗಣಿಸಿ, ಕರ್ನಾಟಕ ಸರ್ಕಾರಿ ಸೇವಾ (ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡಕ್ಕೆ ಮೀಸಲಾದ ಖಾಲಿ ಸ್ಥಾನಗಳ ವಿಶೇಷ ನೇಮಕಾತಿ) ನಿಯಮಗಳು 2001 ರ ನಿಯಮ 6(1) ಹಾಗೂ 6(3) ರ ರೀತ್ಯಾ ಈ ಕೆಳಕಂಡ ಅರ್ಹ ಅಭ್ಯರ್ಥಿಗಳ ಆಯ್ಕೆಯ ಮುಖ್ಯ ಪಟ್ಟಿ ಹಾಗೂ ಹೆಚ್ಚುವರಿ ಪಟ್ಟಿಯನ್ನು ಪ್ರಕಟಿಸಲಾಗಿದೆ.

**ಮುಖ್ಯ ಪಟ್ಟಿ:**

**ಪರಿಶಿಷ್ಟ ಜಾತಿ (ಮಹಿಳಾ ಅಭ್ಯರ್ಥಿ)**

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು ಹಾಗೂ ವಿಳಾಸ | ಒಳ ಮೀಸಲಾತಿ | ಹುಟ್ಟಿದ ದಿನಾಂಕ | ವಿದ್ಯಾರ್ಹತೆ | ಅರ್ಹತಾ ಪರೀಕ್ಷೆಯಲ್ಲಿ ಪಡೆದ ಒಟ್ಟು ಶೇಕಡ ಅಂಕಗಳು |
|---|---|---|---|---|---|
| 1. | ಮಾಲಾ ಆರ್., D/o ರಾಮ, ಸಿದ್ದರ ಬೀದಿ, ಅಂಚೆ ಕಛೇರಿ ಹತ್ತಿರ, ರಂಗೇನಹಳ್ಳಿ ಅಂಚೆ, ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ. | ಪರಿಶಿಷ್ಟ ಜಾತಿ (ಮಹಿಳಾ ಅಭ್ಯರ್ಥಿ) | 25.02.1974 | ಎಸ್.ಎಸ್.ಎಲ್.ಸಿ. ಕನ್ನಡ ಬೆರಳಚ್ಚು ಪ್ರೌಢದರ್ಜೆ, ಕನ್ನಡ ಶೀಘ್ರಲಿಪಿ, ಪ್ರೌಢದರ್ಜೆ. | 201.33 |

**ಹೆಚ್ಚುವರಿ ಪಟ್ಟಿ:**

**ಪರಿಶಿಷ್ಟ ಜಾತಿ (ಮಹಿಳಾ ಅಭ್ಯರ್ಥಿ)**

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು ಹಾಗೂ ವಿಳಾಸ | ಒಳ ಮೀಸಲಾತಿ | ಹುಟ್ಟಿದ ದಿನಾಂಕ | ವಿದ್ಯಾರ್ಹತೆ | ಅರ್ಹತಾ ಪರೀಕ್ಷೆಯಲ್ಲಿ ಪಡೆದ ಒಟ್ಟು ಶೇಕಡ ಅಂಕಗಳು |
|---|---|---|---|---|---|
| 1. | ಶಾರದಮ್ಮ.ಬಿ. D/o ಬೋರಯ್ಯ, ನಂ. 72/ಎ, 3ನೇ ಮುಖ್ಯರಸ್ತೆ, ಇಟ್ಟಮಡು, ಬನಶಂಕರಿ 3ನೇ ಹಂತ, ಬೆಂಗಳೂರು–560 085 | ಪರಿಶಿಷ್ಟ ಜಾತಿ (ಮಹಿಳಾ ಅಭ್ಯರ್ಥಿ) | 01.01.1978 | ಎಸ್.ಎಸ್.ಎಲ್.ಸಿ. ಕನ್ನಡ ಬೆರಳಚ್ಚು ಪ್ರೌಢದರ್ಜೆ, ಕನ್ನಡ ಶೀಘ್ರಲಿಪಿ ಪ್ರೌಢದರ್ಜೆ. | 199.23 |

**ಮುಖ್ಯ ಪಟ್ಟಿ:**

**ಪರಿಶಿಷ್ಟ ಪಂಗಡ (ಇತರೆ)**

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು ಹಾಗೂ ವಿಳಾಸ | ಒಳ ಮೀಸಲಾತಿ | ಹುಟ್ಟಿದ ದಿನಾಂಕ | ವಿದ್ಯಾರ್ಹತೆ | ಅರ್ಹತಾ ಪರೀಕ್ಷೆಯಲ್ಲಿ ಪಡೆದ ಒಟ್ಟು ಶೇಕಡ ಅಂಕಗಳು |
|---|---|---|---|---|---|
| 1. | ಕೆ.ಪುಷ್ಪಾವತಿ, D/o ಕರಿಯಪ್ಪ, ಕಾರ್ಪೆಂಟರ್, ಶ್ರೀ ಮೈಲಾರ ಲಿಂಗೇಶ್ವರ ನಿಲಯ, ಕೊಬರಿಪೇಟೆ, ಹೊಸದುರ್ಗ ತಾ., ಚಿತ್ರದುರ್ಗ–577527 | ಪರಿಶಿಷ್ಟ ಪಂಗಡ (ಇತರೆ) | 19.04.1980 | ಎಸ್.ಎಸ್.ಎಲ್.ಸಿ. ಕನ್ನಡ ಬೆರಳಚ್ಚು ಪ್ರೌಢದರ್ಜೆ, ಕನ್ನಡ ಶೀಘ್ರಲಿಪಿ ಪ್ರೌಢದರ್ಜೆ. | 197.45 |

ಹೆಚ್ಚುವರಿ ಪಟ್ಟಿ:

**ಪರಿಶಿಷ್ಟ ಪಂಗಡ (ಇತರೆ)**

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು ಹಾಗೂ ವಿಳಾಸ | ಒಳ ಮೀಸಲಾತಿ | ಹುಟ್ಟಿದ ದಿನಾಂಕ | ವಿದ್ಯಾರ್ಹತೆ | ಅರ್ಹತಾ ಪರೀಕ್ಷೆಯಲ್ಲಿ ಪಡೆದ ಒಟ್ಟು ಶೇಕಡ ಅಂಕಗಳು |
|---|---|---|---|---|---|
| 1. | ಪ್ರವೀಣ್.ಪಿ.ಎಂ. S/o ಮಧಕರಿ ನಾಯಕ.ಪಿ.ಕೆ. ರಾಜಪ್ಪ ಲೇ ಔಟ್, 2ನೇ ಕ್ರಾಸ್, ಮಂಜೂ ನಿಲಯ, ಜನ್ನಾಪುರ, ಭದ್ರಾವತಿ–577301. | ಪರಿಶಿಷ್ಟ ಪಂಗಡ (ಇತರೆ) | 22.04.1980 | ಎಸ್.ಎಸ್.ಎಲ್.ಸಿ. ಕನ್ನಡ ಬೆರಳಚ್ಚು ಪ್ರೌಢದರ್ಜೆ, ಕನ್ನಡ ಶೀಘ್ರಲಿಪಿ ಪ್ರೌಢದರ್ಜೆ. | 195.90 |

ಆಯ್ಕೆ ಪ್ರಾಧಿಕಾರ ಹಾಗೂ
ಪಿ.ಆರ್.217                    ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು.

**ಕರ್ನಾಟಕ ಲೋಕ ಸೇವಾ ಆಯೋಗ "ಉದ್ಯೋಗ ಸೌಧ" ಬೆಂಗಳೂರು–560001**

**ತಿದ್ದುಪಡಿ ಅಧಿಸೂಚನೆ**

**ತಿದ್ದುಪಡಿ ಸಂಖ್ಯೆ:ಆರ್(2)15/2011–12/ಪಿಎಸ್‌ಸಿ, ದಿನಾಂಕ: 31–05–2011**

ಆಯೋಗದ ಅಧಿಸೂಚನೆ ಸಂಖ್ಯೆ ಪಿಎಸ್‌ಸಿ 1 ಆರ್‌ಟಿಬಿ–1/2011 ದಿನಾಂಕ 17–05–2011 ಅಧಿಸೂಚನೆಯ ಅನುಸೂಚಿಯಲ್ಲಿನ ಹುದ್ದೆಗಳ ಕ್ರಮ ಸಂಖ್ಯೆ 217–224ರಲ್ಲಿ ತೋರಿಸಲಾದ ಔಷಧ ನಿಯಂತ್ರಣ ಇಲಾಖೆಯಲ್ಲಿ ಪ್ರಯೋಗ ಶಾಲಾ ತಂತ್ರಜ್ಞರ 08 ಹುದ್ದೆಗಳ ಕೆಳಕಂಡ ವಿದ್ಯಾರ್ಹತೆ

"Must be holder of a Degree in Pharmancy. Preference shall be given to the candidates who have not less than three years of experience in Laboratory as Technician (Drugs) recognized by the Government." ರ ಬದಲಿಗೆ ವಿದ್ಯಾರ್ಹತೆಯನ್ನು ಈ ಕೆಳಗಿನಂತೆ ಓದಿಕೊಳ್ಳುವುದು:–

" Must have passed Diploma in Pharmancy and PUC with Science**."**

**ಡಿ.ಎಸ್. ವಿಶ್ವನಾಥ್,**
ಪಿ.ಆರ್.213                    ಕಾರ್ಯದರ್ಶಿ,
ಕರ್ನಾಟಕ ಲೋಕ ಸೇವಾ ಆಯೋಗ.

**ಕರ್ನಾಟಕ ಲೋಕ ಸೇವಾ ಆಯೋಗ "ಉದ್ಯೋಗ ಸೌಧ" ಬೆಂಗಳೂರು–560001**

**ತಿದ್ದುಪಡಿ**

**ಸಂಖ್ಯೆ:ಇಪ(2)112/2011–12/ಪಿಎಸ್‌ಸಿ, ಬೆಂಗಳೂರು, ದಿನಾಂಕ:16–05–2011**

2010ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶವನ್ನು ದಿನಾಂಕ:14.04.2011ರ ರಾಜ್ಯಪತ್ರದಲ್ಲಿ ಆಯೋಗದ ಅಧಿಸೂಚನೆ ಸಂಖ್ಯೆ: ಇಪ(1)2979/2010–11/ಪಿಎಸ್‌ಸಿ, ದಿನಾಂಕ:22.03.2011ರಡಿ ಪ್ರಕಟಿಸಲಾಗಿದ್ದು, ಸದರಿ ಅಧಿವೇಶನದಲ್ಲಿ ಅಭ್ಯರ್ಥಿಗಳು ಗಳಿಸಿರುವ ಅಂಕಗಳು ಹಾಗೂ ಹಿಂದಿನ ಅಧಿವೇಶನಗಳಲ್ಲಿ ಪಡೆದಿರುವ ವಿನಾಯಿತಿಗಳನ್ನು ಮತ್ತು ಬಿ.ಕಾಂ, ಎಲ್.ಎಲ್.ಬಿ., ಪದವಿಗಳ ಆಧಾರದ ಮೇಲೆ ವಿನಾಯಿತಿ ನೀಡಿ ಫಲಿತಾಂಶ ಪ್ರಕಟಿಸುವಂತೆ ಅಭ್ಯರ್ಥಿಗಳಿಂದ ಬಂದ ಮನವಿಗಳನ್ನು ಪರಿಶೀಲಿಸಿ ಅರ್ಹ ಅಭ್ಯರ್ಥಿಗಳ ಫಲಿತಾಂಶವನ್ನು ಈ ತಿದ್ದುಪಡಿಯ ಮೂಲಕ ಸಂಬಂಧಿತರ ಮಾಹಿತಿಗಾಗಿ ಪ್ರಕಟಿಸಲಾಗಿದೆ.

**ಅಪೆಂಡಿಕ್ಸ್ "ಎ"**

**ಬೆಂಗಳೂರು ಕೇಂದ್ರ**

**ಅಕೌಂಟ್ಸ್ ಹೈಯರ್**

ಸಾಮಾನ್ಯ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ:60068, 61904, 62256 ಮತ್ತು 62535ನ್ನು ಸೇರಿಸಿ ಓದಿಕೊಳ್ಳುವುದು.

**ಎಸ್.ಎ.ಎಸ್. ಭಾಗ–I**

ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ: 60830 ಮತ್ತು 62082ನ್ನು ಸೇರಿಸಿ ಓದಿಕೊಳ್ಳುವುದು.

ಸಾಮಾನ್ಯ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ: 61690, ಮತ್ತು 61753ನ್ನು ಸೇರಿಸಿ ಓದಿಕೊಳ್ಳುವುದು.

**ಎಸ್.ಎ.ಎಸ್. ಭಾಗ–III**

ಸಾಮಾನ್ಯ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ 62105ನ್ನು ಸೇರಿಸಿ ಓದಿಕೊಳ್ಳುವುದು.

**ಟ್ರೆಜರಿ ಅಕೌಂಟ್ಸ್ ಭಾಗ–II**

ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ: 60471ನ್ನು ಸೇರಿಸಿ ಓದಿಕೊಳ್ಳುವುದು.

**ಅಪೆಂಡಿಕ್ಸ್ "ಬಿ"**

**ಬೆಂಗಳೂರು ಕೇಂದ್ರ**

**ಜನರಲ್ ಲಾ ಭಾಗ–I**

ಜನರಲ್ ಲಾ ಭಾಗ–1ರ ಪತ್ರಿಕೆ–2ರಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ:61250ನ್ನು ಸೇರಿಸಿ ಓದಿಕೊಳ್ಳುವುದು.

**ಎಸ್.ಎ.ಎಸ್. ಭಾಗ–III**

ಎಸ್.ಎ.ಎಸ್. ಭಾಗ– III ರ ಪತ್ರಿಕೆ–2 ರಿಂದ 5ರವರೆಗೆ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ:60155, 60159, 60297, 60687, 61159, 61249, 61336, 61797, 62808, 63261 ಮತ್ತು 63404ನ್ನು ಸೇರಿಸಿ ಓದಿಕೊಳ್ಳುವುದು.

**ಅಪೆಂಡಿಕ್ಸ್ "ಬಿ"**

**ಬೆಂಗಳೂರು ಕೇಂದ್ರ**

**ಟ್ರೆಜರಿ ಅಕೌಂಟ್ಸ್ ಭಾಗ–II**

ಟ್ರೆಜರಿ ಅಕೌಂಟ್ಸ್ ಭಾಗ– II ರ ಪತ್ರಿಕೆ–2 ಮತ್ತು 3 ರಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ: 60911 ಮತ್ತು 62335ನ್ನು ಸೇರಿಸಿ ಓದಿಕೊಳ್ಳುವುದು.

**ಅಪೆಂಡಿಕ್ಸ್ "ಎ"**

**ಬೆಳಗಾವಿ ಕೇಂದ್ರ**

**ಪಿ.ಡಬ್ಲ್ಯೂ.ಡಿ. ಹೈಯರ್ ಭಾಗ–I**

ಸಾಮಾನ್ಯ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ: 65534, ನ್ನು ಸೇರಿಸಿ ಓದಿಕೊಳ್ಳುವುದು.

**ಅಪೆಂಡಿಕ್ಸ್ "ಎ"**

**ಬೆಳಗಾವಿ ಕೇಂದ್ರ**

**ರೆವಿನ್ಯೂ ಲೋಯರ್**

ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ: 65294,ನ್ನು ಸೇರಿಸಿ ಓದಿಕೊಳ್ಳುವುದು.

**ಅಪೆಂಡಿಕ್ಸ್ "ಬಿ"**

**ಬೀದರ್ ಕೇಂದ್ರ**

**ಜನರಲ್ ಲಾ ಭಾಗ–I**

ನೋಂದಣಿ ಸಂಖ್ಯೆ: 67403ನ್ನು ಜನರಲ್ ಲಾ ಭಾಗ–1ರ ಪತ್ರಿಕೆ–2ರಲ್ಲಿ ಉತ್ತೀರ್ಣ ಎಂದು ಸೇರಿಸಿ ಓದಿಕೊಳ್ಳುವುದು.

**ಅಪೆಂಡಿಕ್ಸ್ "ಎ"**

**ಗುಲ್ಬರ್ಗಾ ಕೇಂದ್ರ**

**ಅಕೌಂಟ್ಸ್ ಹೈಯರ್**

ಸಾಮಾನ್ಯ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ: 76623ನ್ನು ಸೇರಿಸಿ ಓದಿಕೊಳ್ಳುವುದು.

**ಲೋಕಲ್ ಲಾಸ್ ಅಂಡ್ ಕಮರ್ಷಿಯಲ್ ಬುಕ್ ಕೀಪಿಂಗ್**

ಸಾಮಾನ್ಯ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ:76865ನ್ನು ಸೇರಿಸಿ ಓದಿಕೊಳ್ಳುವುದು.

**ರೆವಿನ್ಯೂ ಹೈಯರ್ ಭಾಗ–I**

ಸಾಮಾನ್ಯ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ:76610ನ್ನು ಸೇರಿಸಿ ಓದಿಕೊಳ್ಳುವುದು.

**ರೆವಿನ್ಯೂ ಹೈಯರ್ ಭಾಗ–2**

ಸಾಮಾನ್ಯ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ:76610ನ್ನು ಸೇರಿಸಿ ಓದಿಕೊಳ್ಳುವುದು.

**ಅಪೆಂಡಿಕ್ಸ್ "ಎ"**

**ಹಾಸನ ಕೇಂದ್ರ**

**ರಿಜಿಸ್ಟ್ರೇಶನ್**

ಸಾಮಾನ್ಯ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ: 78243ನ್ನು ಸೇರಿಸಿ ಓದಿಕೊಳ್ಳುವುದು.

**ಅಪೆಂಡಿಕ್ಸ್ "ಎ"**

**ಕೋಲಾರ ಕೇಂದ್ರ**

**ಅಕೌಂಟ್ಸ್ ಹೈಯರ್**

ಸಾಮಾನ್ಯ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ: 81313ನ್ನು ಸೇರಿಸಿ ಓದಿಕೊಳ್ಳುವುದು.

**ಅಪೆಂಡಿಕ್ಸ್ "ಬಿ"**

**ಮೈಸೂರು ಕೇಂದ್ರ**

**ಕೋ–ಆಪರೇಶನ್**

ನೋಂದಣಿ ಸಂಖ್ಯೆ: 86653ನ್ನು ಕೋ–ಆಪರೇಶನ್ ಪತ್ರಿಕೆ–1ರಲ್ಲಿ ಉತ್ತೀರ್ಣ ಎಂದು ಸೇರಿಸಿ ಓದಿಕೊಳ್ಳುವುದು.

**ಅಪೆಂಡಿಕ್ಸ್ "ಎ"**

**ತುಮಕೂರು ಕೇಂದ್ರ**

**ರೆವಿನ್ಯೂ ಹೈಯರ್ ಭಾಗ–1**

ನೋಂದಣಿ ಸಂಖ್ಯೆ: 90038ನ್ನು ರೆವಿನ್ಯೂ ಹೈಯರ್ ಭಾಗ–1ರಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣ ಎಂದು ಸೇರಿಸಿ ಓದಿಕೊಳ್ಳುವುದು.

**ಡಿ.ಎಸ್. ವಿಶ್ವನಾಥ್,** ಭಾ.ಆ.ಸೇ.

ಪಿ.ಆರ್.214                    ಕಾರ್ಯದರ್ಶಿ,

ಕರ್ನಾಟಕ ಲೋಕ ಸೇವಾ ಆಯೋಗ.

**ಕೋಲಾರ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಛೇರಿ**

**ಅಧಿಸೂಚನೆ ಸಂಖ್ಯೆ : ಎಡಿಎಂ 02/2011 ದಿನಾಂಕಃ 21/04/2011.**

**ವಿಷಯ:** ಶೀಘ್ರಲಿಪಿಗಾರ, ಬೆರಳಚ್ಚುಗಾರರು, ಬೆರಳಚ್ಚು–ನಕಲುಗಾರರು, ಆದೇಶ ಜಾರಿಕಾರರು ಹಾಗೂ ಸೇವಕರ ಹುದ್ದೆಗಳ ನೇಮಕಾತಿ ಬಗ್ಗೆ.

**ಉಲ್ಲೇಖ :** 1. ಸರ್ಕಾರಿ ಅಧಿಸೂಚನೆ ಸಂಖ್ಯೆ ಎಲ್‌ಎಡಬ್ಲ್ಯೂ 15/ಎಲ್‌ಸಿಇ–2010, ದಿಃ 12–1–2011.

2. ಕರ್ನಾಟಕ ಉಚ್ಚ ನ್ಯಾಯಾಲಯ ಬೆಂಗಳೂರು ರವರ ಪತ್ರ ಸಂಖ್ಯೆ ಎಲ್‌ಸಿಎ– II 70/2011 ದಿನಾಂಕ 28–3–11.

ಉಲ್ಲೇಖ ಒಂದರಲ್ಲಿ ನಮೂದಿಸಿರುವ ಆದೇಶದನ್ವಯ ಹಾಗೂ ಗೌರವಾನ್ವಿತ ಕರ್ನಾಟಕ ಉಚ್ಚ ನ್ಯಾಯಾಲಯದ ಆದೇಶದಂತೆ ಕೋಲಾರ ಜಿಲ್ಲೆಯ ಅಧೀನ ನ್ಯಾಯಾಲಯಗಳಲ್ಲಿ ಖಾಲಿ ಇರುವ ಒಂದು ಶೀಘ್ರಲಿಪಿಗಾರ, ಮೂರು ಬೆರಳಚ್ಚುಗಾರರು, ಎರಡು ಬೆರಳಚ್ಚು ನಕಲುಗಾರರು, ಮೂರು ಆದೇಶ ಜಾರಿಕಾರರು ಹಾಗೂ ನಾಲ್ಕು ಸೇವಕರ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಈ ಅಧಿಸೂಚನೆಯ ಜೊತೆಗೆ ಲಗತ್ತಿಸಿರುವ ಅರ್ಜಿ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

**ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ 25.05.2011, ಅಪರಾಹ್ನ 5–00 ಗಂಟೆಯವರೆಗೆ.**

**ಶೀಘ್ರಲಿಪಿಗಾರರು : ಖಾಲಿ ಇರುವ ಹುದ್ದೆಗಳು – 01.**

**ವೇತನ ಶ್ರೇಣಿಃ 7275–175–7800–200–8600–225–9500–250–10500–300–12300–350–13350.**

ಪ್ರಥಮ ರಾಷ್ಟ್ರೀಯ ನ್ಯಾಯಾಂಗ ವೇತನ ಆಯೋಗದ ಶಿಫಾರಸ್ಸಿನಂತೆ, ಸರ್ಕಾರಿ ಆದೇಶ ಸಂಖ್ಯೆ ಲಾ 128 ಎಲ್.ಎ.ಸಿ. 2005 ದಿನಾಂಕ 14.07.2008 ಮತ್ತು 29.10.2010 ರನ್ವಯ ಒಂದು ಹೆಚ್ಚುವರಿ ವೇತನ ಮುಂಬಡ್ತಿಗೆ ಅರ್ಹರಿರುತ್ತಾರೆ.

**ಹುದ್ದೆಗಳ ವರ್ಗೀಕರಣ**

| ಮೀಸಲಾತಿ | ಮಹಿಳಾ ಅಭ್ಯರ್ಥಿ | ಒಟ್ಟು ಹುದ್ದೆಗಳು |
|---|---|---|
| ಸಾಮಾನ್ಯ | 1 | 1 |
| ಒಟ್ಟು | 1 | 1 |

ವಿದ್ಯಾರ್ಹತೆ ಃ ಎಸ್.ಎಸ್.ಎಲ್.ಸಿ; ಅಥವಾ ತತ್ಸಮಾನ ಪರೀಕ್ಷೆ ಮತ್ತು ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನಡೆಸುವ ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಯಲ್ಲೂ ಹಿರಿಯ ಶ್ರೇಣಿಃ ಬೆರಳಚ್ಚು ಮತ್ತು ಶೀಘ್ರಲಿಪಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕದೊಳಗೆ ಉತ್ತೀರ್ಣರಾಗಿರಬೇಕು.

ಆಯ್ಕೆಯ ವಿಧಾನ ಃ ಅರ್ಹತಾ ಪರೀಕ್ಷೆಗಳಲ್ಲಿ ಗಳಿಸಿರುವ ಒಟ್ಟು ಶೇಕಡಾವಾರು ಅಂಕಗಳು ಮತ್ತು ನಿಮಿಷ ಒಂದಕ್ಕೆ 120 ಪದಗಳ ದರದಲ್ಲಿ 5 ನಿಮಿಷಗಳ ಉಕ್ತಲೇಖನವನ್ನು ತೆಗೆದುಕೊಂಡು, ಉಕ್ತಲೇಖನವನ್ನು 45 ನಿಮಿಷಗಳಲ್ಲಿ ಅನುಲಿಪಿ ಮಾಡುವ ಅರ್ಹತಾ ಪರೀಕ್ಷೆಯಲ್ಲಿ ಗಳಿಸುವ ಅಂಕಗಳು ಮತ್ತು ಸಂದರ್ಶನದಲ್ಲಿ ಗಳಿಸುವ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

ಟಿಪ್ಪಣಿಃ ಅರ್ಹತಾ ಪರೀಕ್ಷೆಯು ಗರಿಷ್ಠ 100 ಅಂಕಗಳನ್ನು ಒಳಗೊಂಡಿದ್ದು, ಅದರಲ್ಲಿ ತೇರ್ಗಡೆಯಾಗಲು ಕನಿಷ್ಠ 50 ಅಂಕಗಳನ್ನು ಪಡೆಯಬೇಕು ಮತ್ತು ಸಂದರ್ಶನವು 5 ಅಂಕಗಳನ್ನೊಳಗೊಂಡಿರುತ್ತದೆ.

**ಬೆರಳಚ್ಚುಗಾರರು : ಖಾಲಿ ಇರುವ ಹುದ್ದೆಗಳು – 03.**

**ವೇತನ ಶ್ರೇಣಿಃ 5800–100–6000–125–6500–150–7100–175–7800–200–8600–225–9500–250–10500.**

ಪ್ರಥಮ ರಾಷ್ಟ್ರೀಯ ನ್ಯಾಯಾಂಗ ವೇತನ ಆಯೋಗದ ಶಿಫಾರಸ್ಸಿನಂತೆ, ಸರ್ಕಾರಿ ಆದೇಶ ಸಂಖ್ಯೆ ಲಾ 128 ಎಲ್.ಎ.ಸಿ. 2005 ದಿನಾಂಕ 14.07.2008 ಮತ್ತು 29.10.2010 ರನ್ವಯ ಒಂದು ಹೆಚ್ಚುವರಿ ವೇತನ ಮುಂಬಡ್ತಿಗೆ ಅರ್ಹರಿರುತ್ತಾರೆ.

**ಹುದ್ದೆಗಳ ವರ್ಗೀಕರಣ**

| ಮೀಸಲಾತಿ | ಮಹಿಳಾ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಒಟ್ಟು ಹುದ್ದೆಗಳು |
|---|---|---|---|
| ಸಾಮಾನ್ಯ | – | 1 | 1 |
| ii–ಎ | 1 | – | 1 |
| ಪರಿಶಿಷ್ಟ ಜಾತಿ | – | 1 | 1 |
| ಒಟ್ಟು | 1 | 2 | 3 |

ವಿದ್ಯಾರ್ಹತೆ : ಎಸ್.ಎಸ್.ಎಲ್.ಸಿ; ಅಥವಾ ತತ್ಸಮಾನ ಪರೀಕ್ಷೆ ಮತ್ತು ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನಡೆಸುವ ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಯಲ್ಲೂ ಹಿರಿಯ ಶ್ರೇಣಿ ಬೆರಳಚ್ಚು ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕದೊಳಗೆ ಉತ್ತೀರ್ಣರಾಗಿರಬೇಕು.

ಆಯ್ಕೆಯ ವಿಧಾನ : ಅರ್ಹತಾ ಪರೀಕ್ಷೆಗಳಲ್ಲಿ ಗಳಿಸಿರುವ ಒಟ್ಟು ಶೇಕಡಾವಾರು ಅಂಕಗಳು 15 ನಿಮಿಷಗಳ ಉಕ್ತಲೇಖನದಲ್ಲಿ ಕೊಡುವ ವಿಷಯವನ್ನು ಬೆರಳಚ್ಚು ಮಾಡುವ ಅರ್ಹತಾ ಪರೀಕ್ಷೆಯಲ್ಲಿ ಗಳಿಸುವ ಅಂಕಗಳು ಮತ್ತು ಸಂದರ್ಶನದಲ್ಲಿ ಗಳಿಸುವ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

**ಟಿಪ್ಪಣಿ:** ಅರ್ಹತಾ ಪರೀಕ್ಷೆಯು ಗರಿಷ್ಠ 100 ಅಂಕಗಳನ್ನು ಒಳಗೊಂಡಿದ್ದು, ಅದರಲ್ಲಿ ತೇರ್ಗಡೆಯಾಗಲು ಕನಿಷ್ಠ 50 ಅಂಕಗಳನ್ನು ಪಡೆಯಬೇಕು ಮತ್ತು ಸಂದರ್ಶನವು 5 ಅಂಕಗಳನ್ನೊಳಗೊಂಡಿರುತ್ತದೆ.

**ಬೆರಳಚ್ಚು–ನಕಲುಗಾರರು : ಖಾಲಿ ಇರುವ ಹುದ್ದೆಗಳು – 02.**

**ವೇತನ ಶ್ರೇಣಿ 5800–100–6000–125–6500–150–7100–175–7800–200–8600–225–9500–250–10500.**

ಪ್ರಥಮ ರಾಷ್ಟ್ರೀಯ ನ್ಯಾಯಾಂಗ ವೇತನ ಆಯೋಗದ ಶಿಫಾರಸ್ಸಿನಂತೆ, ಸರ್ಕಾರಿ ಆದೇಶ ಸಂಖ್ಯೆ ಲಾ 128 ಎಲ್.ಎ.ಸಿ. 2005 ದಿನಾಂಕ 14.07.2008 ಮತ್ತು 29.10.2010 ರನ್ವಯ ಒಂದು ಹೆಚ್ಚುವರಿ ವೇತನ ಮುಂಬಡ್ತಿಗೆ ಅರ್ಹರಿರುತ್ತಾರೆ.

**ಹುದ್ದೆಗಳ ವರ್ಗೀಕರಣ**

| ಮೀಸಲಾತಿ | ಗ್ರಾಮೀಣ ಅಭ್ಯರ್ಥಿ | ಇತರೆ | ಒಟ್ಟು ಹುದ್ದೆಗಳು |
|---|---|---|---|
| ಸಾಮಾನ್ಯ | 1 | – | 1 |
| iii–ಎ | – | 1 | 1 |
| ಒಟ್ಟು | 1 | 1 | 2 |

**ವಿದ್ಯಾರ್ಹತೆ :** ಎಸ್.ಎಸ್.ಎಲ್.ಸಿ; ಅಥವಾ ತತ್ಸಮಾನ ಪರೀಕ್ಷೆ ಮತ್ತು ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನಡೆಸುವ ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಯಲ್ಲೂ ಕಿರಿಯ ಶ್ರೇಣಿ ಬೆರಳಚ್ಚು ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕದೊಳಗೆ ಉತ್ತೀರ್ಣರಾಗಿರಬೇಕು.

**ಆಯ್ಕೆಯ ವಿಧಾನ :** ಅರ್ಹತಾ ಪರೀಕ್ಷೆಗಳಲ್ಲಿ ಗಳಿಸಿರುವ ಒಟ್ಟು ಶೇಕಡಾವಾರು ಅಂಕಗಳು 15 ನಿಮಿಷಗಳ ಉಕ್ತಲೇಖನದಲ್ಲಿ ಕೊಡುವ ವಿಷಯವನ್ನು ಬೆರಳಚ್ಚು ಮಾಡುವ ಅರ್ಹತಾ ಪರೀಕ್ಷೆಯಲ್ಲಿ ಗಳಿಸುವ ಅಂಕಗಳು ಮತ್ತು ಸಂದರ್ಶನದಲ್ಲಿ ಗಳಿಸುವ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

**ಟಿಪ್ಪಣಿ:** ಅರ್ಹತಾ ಪರೀಕ್ಷೆಯು ಗರಿಷ್ಠ 100 ಅಂಕಗಳನ್ನು ಒಳಗೊಂಡಿದ್ದು, ಅದರಲ್ಲಿ ತೇರ್ಗಡೆಯಾಗಲು ಕನಿಷ್ಠ 50 ಅಂಕಗಳನ್ನು ಪಡೆಯಬೇಕು ಮತ್ತು ಸಂದರ್ಶನವು 5 ಅಂಕಗಳನ್ನೊಳಗೊಂಡಿರುತ್ತದೆ.

**ಆದೇಶ ಜಾರಿಕಾರರು : ಖಾಲಿ ಇರುವ ಹುದ್ದೆಗಳು – 03.**

**ವೇತನ ಶ್ರೇಣಿ 5500–100–6000–125–6500–150–7100–175–7800–200–8600–225–9500.**

**ಹುದ್ದೆಗಳ ವರ್ಗೀಕರಣ**

| ಮೀಸಲಾತಿ | ಮಹಿಳಾ ಅಭ್ಯರ್ಥಿ | ಯೋಜನಾ ನಿರಾಶ್ರಿತ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಒಟ್ಟು ಹುದ್ದೆಗಳು |
|---|---|---|---|---|
| ಪರಿಶಿಷ್ಟ ಜಾತಿ | – | – | 1 | 1 |
| ಪ್ರವರ್ಗ–2ಬಿ | 1 | – | – | 1 |
| ಸಾಮಾನ್ಯ | – | 1 | – | 1 |
| ಒಟ್ಟು | 1 | 1 | 1 | 3 |

**ವಿದ್ಯಾರ್ಹತೆ:** ಎಸ್.ಎಸ್.ಎಲ್.ಸಿ; ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕದೊಳಗೆ ಉತ್ತೀರ್ಣರಾಗಿರಬೇಕು.

**ಆಯ್ಕೆಯ ವಿಧಾನ:** ಕರ್ನಾಟಕ ಅಧೀನ ನ್ಯಾಯಾಲಯಗಳ (ಲಿಪಿಕ ಮತ್ತು ಇತರೆ ಹುದ್ದೆಗಳು) (ನೇಮಕಾತಿ) (ತಿದ್ದುಪಡಿ) ನಿಯಮಗಳು 2007 ರನ್ವಯ ಅರ್ಹತಾ ಪರೀಕ್ಷೆಗಳಲ್ಲಿ ಗಳಿಸಿರುವ ಒಟ್ಟು ಶೇಕಡಾವಾರು ಅಂಕಗಳು ಆಧಾರಗಳ ಮೇಲೆ ಒಂದು

ಹುದ್ದೆಗೆ 25 ಅಭ್ಯರ್ಥಿಗಳಂತೆ ಅತಿ ಹೆಚ್ಚು ಅಂಕ ಪಡೆದ ಅಭ್ಯರ್ಥಿಗಳನ್ನು ಪ್ರಕಟಿಸಿರುವ ಹುದ್ದೆಗಳಿಗೆ ಅನುಗುಣವಾಗಿ ಸಂದರ್ಶನಕ್ಕೆ ಕರೆಯಲಾಗುವುದು. ಸಂದರ್ಶನದಲ್ಲಿ ಗಳಿಸಿದ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

**ವಾಹನ ಚಾಲನ ರಹದಾರಿ ಇರುವ ಅಭ್ಯರ್ಥಿಗಳಿಗೆ ಆದ್ಯತೆ ನೀಡಲಾಗುವುದು.**

ಟಿಪ್ಪಣಿಃ ಸಂದರ್ಶನವು 10 ಅಂಕಗಳನ್ನು ಒಳಗೊಂಡಿರುತ್ತದೆ.

**ಸೇವಕರುಃ ಖಾಲಿ ಹುದ್ದೆಗಳು – 4.**

**ವೇತನ ಶ್ರೇಣಿಃ : 4800–100–6000–125–6500–150–7100–175–7275.**

**ಹುದ್ದೆಗಳ ವರ್ಗೀಕರಣ**

| ಮೀಸಲಾತಿ | ಮಹಿಳಾ ಅಭ್ಯರ್ಥಿ | ಅಂಗವಿಕಲ ಅಭ್ಯರ್ಥಿ | ಒಟ್ಟು ಹುದ್ದೆಗಳು |
|---|---|---|---|
| **ಸಾಮಾನ್ಯ** | **1** | **1** | **2** |
| **iii– ಎ** | **1** | **–** | **1** |
| **ಪ.ಜಾತಿ** | **1** | **–** | **1** |
| **ಒಟ್ಟು** | **3** | **1** | **4** |

**ವಿದ್ಯಾರ್ಹತೆಃ** 7ನೇ ತರಗತಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕದೊಳಗೆ ಉತ್ತೀರ್ಣರಾಗಿರಬೇಕು.

**ಆಯ್ಕೆಯ ವಿಧಾನಃ** ಕರ್ನಾಟಕ ಅಧೀನ ನ್ಯಾಯಾಲಯಗಳ (ಲಿಪಿಕ ಮತ್ತು ಇತರೆ ಹುದ್ದೆಗಳು) (ನೇಮಕಾತಿ) (ತಿದ್ದುಪಡಿ) ನಿಯಮಗಳು 2007 ರನ್ವಯ ಅರ್ಹತಾ ಪರೀಕ್ಷೆಗಳಲ್ಲಿ ಗಳಿಸಿರುವ ಒಟ್ಟು ಶೇಕಡಾವಾರು ಅಂಕಗಳು ಆಧಾರಗಳ ಮೇಲೆ ಒಂದು ಹುದ್ದೆಗೆ 10 ಅಭ್ಯರ್ಥಿಗಳಂತೆ ಅತಿ ಹೆಚ್ಚು ಅಂಕ ಪಡೆದ ಅಭ್ಯರ್ಥಿಗಳನ್ನು ಪ್ರಕಟಿಸಿರುವ ಹುದ್ದೆಗಳಿಗೆ ಅನುಗುಣವಾಗಿ ಸಂದರ್ಶನಕ್ಕೆ ಕರೆಯಲಾಗುವುದು. ಸಂದರ್ಶನದಲ್ಲಿ ಗಳಿಸಿದ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

**ಟಿಪ್ಪಣಿಃ ಸಂದರ್ಶನವು 10 ಅಂಕಗಳನ್ನು ಒಳಗೊಂಡಿರುತ್ತದೆ.**

ಮಹಿಳಾ ಅಭ್ಯರ್ಥಿಗಳ, ಗ್ರಾಮೀಣ ಅಭ್ಯರ್ಥಿಗಳ, ಯೋಜನಾ ನಿರಾಶ್ರಿತ ಅಭ್ಯರ್ಥಿಗಳ, ಅಂಗವಿಕಲ ಅಭ್ಯರ್ಥಿಗಳ ಮೀಸಲಾತಿಗಳಲ್ಲಿ ಅರ್ಹ ಅಭ್ಯರ್ಥಿಗಳು ಲಭ್ಯವಿರದೇ ಇದ್ದ ಪಕ್ಷದಲ್ಲಿ, ಆ ಹುದ್ದೆಗಳನ್ನು ಆಯಾ ಪಂಗಡಗಳ ಇತರೆ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು. ಆಯಾ ಪಂಗಡಗಳ ಇತರೆ ಅಭ್ಯರ್ಥಿಗಳೂ ಸಹ ಲಭ್ಯವಾಗದಿದ್ದಲ್ಲಿ, ಸದರಿ ಹುದ್ದೆಗಳನ್ನು ಸಾಮಾನ್ಯ ಇತರೆ ವರ್ಗದ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

ಅರ್ಹತಾ ಪರೀಕ್ಷೆಗೆ ಹಾಗೂ ಸಂದರ್ಶನಕ್ಕೆ ಆಯ್ಕೆಯಾಗುವ ಅಭ್ಯರ್ಥಿಗಳು ಕೋಲಾರ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಛೇರಿಗೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.

**ವಯೋಮಿತಿಃ**

**ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು**

**ಅ. ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.**

**ಆ. ಗರಿಷ್ಠ ವಯೋಮಿತಿ**

| | |
|---|---|
| ಸಾಮಾನ್ಯ ವರ್ಗ | 35 ವರ್ಷ |
| 2ಎ, 2ಬಿ, 3ಎ , 3 ಬಿ | 38 ವರ್ಷ |
| ಪ. ಜಾತಿ , ಪ. ಪಂಗಡ , ಪ್ರವರ್ಗ–1 | 40 ವರ್ಷ |

ಅಭ್ಯರ್ಥಿಗಳು ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಗರಿಷ್ಠ ವಯಸ್ಸನ್ನು ಮೀರಿರಕೂಡದು.

**ವಯೋಮಿತಿ ಸಡಿಲಿಕೆ :**

ಈ ಕೆಳಗಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಟ ವಯೋಮಿತಿಯನ್ನು ಆಯಾ ಅಭ್ಯರ್ಥಿಗಳಿಗೆ ನಮೂದಿಸಿರುವ ಮಟ್ಟಿಗೆ ಹೆಚ್ಚಿಸಲಾಗುವುದು.

1. ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ ಗರಿಷ್ಠ ವಯೋಮಿತಿಯನ್ನು ಅವರು ಎಷ್ಟು ವರ್ಷಗಳ ಅವಧಿಗೆ ಹುದ್ದೆಯಲ್ಲಿ ಸೇವೆ ಸಲ್ಲಿಸಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ, ಎರಡರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳ ಸಡಿಲಿಕೆಯನ್ನು ನೀಡಲಾಗುವುದು.
2. ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ, ಅವನು ಸಶಸ್ತ್ರ ದಳಗಳಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಆ ವರ್ಷಗಳಿಗೆ 3 ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.
3. ಅಭ್ಯರ್ಥಿಯು ಅಂಗವಿಕಲನಾಗಿದ್ದಲ್ಲಿ, ವಿಧವೆಯಾಗಿದ್ದಲ್ಲಿ ಮತ್ತು ಜೀತ ಕಾರ್ಮಿಕನಾಗಿದ್ದಲ್ಲಿ 10 ವರ್ಷಗಳು.

**ಪರಿವೀಕ್ಷಣಾ ಅವಧಿ :**

ಆಯ್ಕೆಯಾದ ಅಭ್ಯರ್ಥಿಗಳು ಕರ್ನಾಟಕ ಸೇವಾ ನಿಯಮ (ಪರಿವೀಕ್ಷಣೆ ನಿಯಮಗಳು) 1977ರ ಪ್ರಕಾರ 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯಲ್ಲಿರುತ್ತಾರೆ. ಈ ಅವಧಿಯಲ್ಲಿ ಅಭ್ಯರ್ಥಿಗಳು ಅವರುಗಳ ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ಮತ್ತು ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕು.

**ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ವಿಧಾನ :**

ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ನೇಮಕಾತಿ ಪ್ರಾಧಿಕಾರದಿಂದ ನಿರಾಕ್ಷೇಪಣಾ ಪ್ರಮಾಣಪತ್ರವನ್ನು ಪಡೆದು, ಅರ್ಜಿಗಳನ್ನು ಸಂಬಂಧಿತ ನೇಮಕಾತಿ ಪ್ರಾಧಿಕಾರದ ಮೂಲಕ ಕಳುಹಿಸಬೇಕು.

**ಅರ್ಜಿ ಸಲ್ಲಿಸುವ ವಿಧಾನ :**

ಈ ಪ್ರಕಟಣೆಯಲ್ಲಿ ಲಗತ್ತಿಸಿರುವ ಅರ್ಜಿ ನಮೂನೆಯನ್ನು ಬೆರಳಚ್ಚು ಮಾಡಿ/ಕಂಪ್ಯೂಟರ್ ಮೂಲಕ ತಯಾರಿಸಿ,, **ಅರ್ಜಿಯನ್ನು ತಮ್ಮ ಸ್ವಂತ ಕೈಬರಹದಲ್ಲಿ ತಮಗೆ ಅನ್ವಯಿಸುವ ಎಲ್ಲಾ ಅಂಕಣಗಳನ್ನು ಭರ್ತಿ ಮಾಡುವುದು.** ಅಭ್ಯರ್ಥಿಯು ತನ್ನ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಅರ್ಜಿಯ ಮೇಲೆ ಅಂಟಿಸಿ, ಅದರ ಮೇಲೂ ಸಹ ಸಹಿ ಮಾಡುವುದು ಹಾಗೂ ಅರ್ಜಿ ನಮೂನೆಯ ಕೊನೆಯಲ್ಲಿ ಘೋಷಣೆಯ ನಂತರ ಸಹಿ ಮಾಡುವುದು. ಹುದ್ದೆಗೆ ಸಂಬಂಧಿಸಿದಂತೆ ವಿದ್ಯಾರ್ಹತೆ, ವಯಸ್ಸು ಮತ್ತು ಕೋರಿರುವ ಮೀಸಲಾತಿಗೆ ಸಂಬಂಧಿಸಿದಂತೆ ಪ್ರಮಾಣ ಪತ್ರಗಳನ್ನು ಅಧಿಕೃತ ಅಧಿಕಾರಿಗಳಿಂದ ಪಡೆದು, ಅವುಗಳ ನಕಲುಗಳನ್ನು ಸ್ವಯಂ ಧೃಢೀಕರಿಸಿ ಅರ್ಜಿಯೊಂದಿಗೆ ಲಗತ್ತಿಸಿ ಅರ್ಜಿಯನ್ನು**" ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಕೋಲಾರ–563 101,** ಇವರಿಗೆ ದಿ : 25–05–2011 ಅಪರಾಹ್ನ 5–00 ಗಂಟೆಯೊಳಗೆ ತಲುಪುವಂತೆ ಕಳುಹಿಸುವುದು. ಅರ್ಜಿಯನ್ನು ಕಳುಹಿಸುವ ಲಕೋಟೆ ಮೇಲೆ ಅಭ್ಯರ್ಥಿಯು ಯಾವ ಹುದ್ದೆಗೆ ಅರ್ಜಿಯನ್ನು ಸಲ್ಲಿಸುತ್ತಾನೆ ಎಂಬುದರ ಬಗ್ಗೆ ಹುದ್ದೆಯ ಹೆಸರನ್ನು ನಮೂದಿಸುವುದು.

**ಅಭ್ಯರ್ಥಿಗಳು ಅರ್ಜಿಯೊಂದಿಗೆ ಲಗತ್ತಿಸಬೇಕಾದ ದಾಖಲಾತಿಗಳು:**

ಅಭ್ಯರ್ಥಿಗಳು ಈ ಕೆಳಕಂಡ ದಾಖಲಾತಿಗಳ ಸ್ವಯಂ ಧೃಢಿಕರಿಸಿದ ಒಂದು ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು.

1. ಇತ್ತಿಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರ.
2. ಜನ್ಮ ದಿನಾಂಕದ ಧೃಡೀಕರಣಕ್ಕಾಗಿ ಎಸ್‌ಎಸ್‌ಎಲ್‌ಸಿ ಅಂಕ ಪಟ್ಟಿ/ಕ್ಯುಮುಲೇಟೀವ್ ರೆಕಾರ್ಡ್/ಇನ್ನಾವುದೇ ಅಧಿಕೃತ ದಾಖಲಾತಿಗಳು.
3. ವಿದ್ಯಾರ್ಹತೆಯ ಬಗ್ಗೆ ಅಂಕಪಟ್ಟಿಗಳು.
4. ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ನಮೂನೆ 'ಡಿ'ಯಲ್ಲಿ ಪ್ರವರ್ಗ–1 ರ ಅಭ್ಯರ್ಥಿಗಳು ನಮೂನೆ 'ಇ' ಯಲ್ಲಿ ಮತ್ತು 2ಎ, 2 ಬಿ , 3 ಎ ಮತ್ತು 3 ಬಿ ಗೆ ಸೇರಿದ ಅಭ್ಯರ್ಥಿಗಳು ನಮೂನೆ 'ಎಫ್'ನಲ್ಲಿ ಸಂಬಂಧಿಸಿದ ತಹಶೀಲ್ದಾರರಿಂದ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳನ್ನು ಪಡೆದು ಸಲ್ಲಿಸಬೇಕು.
5. ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ನಿಗದಿತ ನಮೂನೆ –2 ರಲ್ಲಿ ಅಧಿಕೃತ ಅಧಿಕಾರಿಗಳಿಂದ ಪಡೆದು ಅದನ್ನು ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ಸಹಿ ಮಾಡಿಸಿ ಸಲ್ಲಿಸಬೇಕು.
6. ಗ್ರಾಮೀಣ ಮೀಸಲಾತಿಯನ್ನು ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ಪ್ರಮಾಣ ಪತ್ರ ನಮೂನೆ – 2 ರ ಜೊತೆ ನಮೂನೆ – 1 ರಲ್ಲೂ ಧೃಢಿಕರಣ ಪತ್ರವನ್ನು ಸಲ್ಲಿಸುವುದು.
7. ವಿಧವೆಯರು, ಜೀತ ಕಾರ್ಮಿಕರು ವಯೋಮಿತಿ ರಿಯಾಯ್ತಿ ಕೋರಲು ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣಪತ್ರವನ್ನು ಸಲ್ಲಿಸುವುದು.
8. ಅರ್ಜಿಯನ್ನು ಕಳುಹಿಸಲು ನಿಗದಿಪಡಿಸಿದ ದಿನಾಂಕದಂದು 6 ತಿಂಗಳ ಒಳಗೆ ಇಬ್ಬರು ಗೌರವಾನ್ವಿತ ವ್ಯಕ್ತಿಗಳು ನೀಡಿರುವ ನಡತೆ ಪ್ರಮಾಣಪತ್ರವನ್ನು ಸಲ್ಲಿಸುವುದು.
9. ಸ್ವಯಂ ವಿಳಾಸವಿರುವ ರೂ 5/– ಅಂಚೆ ಚೀಟಿ ಅಂಟಿಸಿರುವ ಲಕೋಟೆಯನ್ನು ಅರ್ಜಿಯೊಂದಿಗೆ ಲಗತ್ತಿಸುವುದು.
10. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಪ್ರವರ್ಗ–1 ರ ಅಭ್ಯರ್ಥಿಗಳು ಅರ್ಜಿಯೊಂದಿಗೆ 20/– ರೂಗಳ ಐ.ಪಿ.ಒ ಅಥವಾ ಡಿ.ಡಿ ಹಾಗೂ ಉಳಿದ ವರ್ಗಗಳ ಅಭ್ಯರ್ಥಿಗಳು ಅರ್ಜಿಯೊಂದಿಗೆ 50/– ರೂಗಳ ಐ.ಪಿ.ಒ ಅಥವಾ ಡಿ.ಡಿಯನ್ನು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೋಲಾರ, ಇವರ ಹೆಸರಿಗೆ ಪಡೆದು ಲಗತ್ತಿಸತಕ್ಕದ್ದು.

**ವಿಶೇಷ ಸೂಚನೆ:**

ಅರ್ಜಿಯೊಂದಿಗೆ ಲಗತ್ತಿಸುವ ಎಲ್ಲಾ ಪ್ರಮಾಣಪತ್ರಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಲಗತ್ತಿಸಿರಬೇಕು ಇಲ್ಲವೇ ಕೊನೆಯ ದಿನಾಂಕದಂದು ಸಿಂಧುವಾಗಿರಬೇಕು ಮತ್ತು ಕಡ್ಡಾಯವಾಗಿ ಸ್ವಯಂ ಧೃಢೀಕರಿಸಿರಬೇಕು.

ಯಾವುದೇ ಅಭ್ಯರ್ಥಿಯು ಸರ್ಕಾರಿ/ಸರ್ಕಾರೇತರ ಅಧಿಕಾರಿಗಳಿಂದ ತನ್ನ ಅಭ್ಯರ್ಥಿತ್ವದ ಬಗ್ಗೆ ಪ್ರಭಾವ ಬೀರಿದರೆ ಅಂತಹ ಅಭ್ಯರ್ಥಿಗಳು ನೇಮಕಾತಿಗೆ ಅರ್ಹರಾಗಿರುವುದಿಲ್ಲ.

ಯಾವುದೇ ಅಭ್ಯರ್ಥಿಯು ಸಂದರ್ಶನದ ಬಗ್ಗೆ ಮಾಹಿತಿ ಬರದಿದ್ದರೆ, ಅವರು ಸಂದರ್ಶನಕ್ಕೆ ಅರ್ಹರಲ್ಲ ಎಂದು ತಿಳಿಯುವುದು ಮತ್ತು ಈ ಬಗ್ಗೆ ಯಾವುದೇ ಪತ್ರ ವ್ಯವಹಾರವನ್ನು ಮಾಡಲಾಗುವುದಿಲ್ಲ.

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ದಿನಾಂಕವು ಸಾರ್ವಜನಿಕ ರಜೆಯಾಗಿದ್ದರೆ ಮುಂದಿನ ಕಛೇರಿ ಕೆಲಸದ ದಿನ ಅರ್ಜಿ ಸಲ್ಲಿಸಲು ಕಡೆಯ ದಿನಾಂಕ ಎಂದು ತಿಳಿಯುವುದು.

**ವೀರಣ್ಣ .ಜಿ. ತಿಗಡಿ**

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೋಲಾರ.

**ಅರ್ಜಿ ನಮೂನೆ**

**ಅಭ್ಯರ್ಥಿಯ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರದ ಮೇಲೆ ಸಹಿ ಮಾಡಿ ಅಂಟಿಸುವುದು**

**ರವರಿಗೆ,**
**ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,**
**ಕೋಲಾರ.**

ತಮ್ಮ ಕಛೇರಿಯ ಅಧಿಸೂಚನೆ ಸಂಖ್ಯೆ ಎಡಿಎಂ/2/2011, ದಿಃ 21–4–2011 ರ ಮೇರೆಗೆ ನಾನು __________________ ಹುದ್ದೆಗೆ ಅರ್ಜಿಯನ್ನು ಸಲ್ಲಿಸುತ್ತಿದ್ದೇನೆ ಮತ್ತು ಈ ಕೆಳಕಂಡ ಮಾಹಿತಿಯನ್ನು ಒದಗಿಸುತ್ತಿದ್ದೇನೆ.

| | | | | | | |
|---|---|---|---|---|---|---|
| 1 | ಅಭ್ಯರ್ಥಿಯ ಹೆಸರು (ದಪ್ಪ ಅಕ್ಷರಗಳಲ್ಲಿ) | | | | | |
| 2 | ತಂದೆ/ಗಂಡನ ಹೆಸರು | | | | | |
| 3 | ತಾಯಿಯ ಹೆಸರು | | | | | |
| 4 | ಜನ್ಮ ದಿನಾಂಕ | | | | | |
| 5 | ವಯಸ್ಸು (ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದಂದು ಅಭ್ಯರ್ಥಿಯ ವಯಸ್ಸು) | ವರ್ಷ | ತಿಂಗಳು | ದಿನ | | |
| 9 | ಲಿಂಗ | ಪುರುಷ | ಮಹಿಳೆ | | | |
| 7 | ರಾಷ್ಟ್ರೀಯತೆ | | | | | |
| 8 | ಧರ್ಮ ಮತ್ತು ಜಾತಿ | | | | | |
| 9 | ವೈವಾಹಿಕ ಸ್ಥಿತಿ | ವಿವಾಹಿತ | ಅವಿವಾಹಿತ | | | |
| 10 | ಕೋರುವ ಮೀಸಲಾತಿಗಳು (ಕೋರುವ ಮೀಸಲಾತಿಯನ್ನು ✔ ಚಿಹ್ನೆ ಹಾಕುವುದರ ಮೂಲಕ ಗುರುತಿಸಿ ಪ್ರಮಾಣ ಪತ್ರದ ಸ್ವಯಂ ಧೃಢೀಕೃತ ನಕಲನ್ನು ಲಗತ್ತಿಸಬೇಕು) | ಸಾಮಾನ್ಯ | ಪ.ಜಾತಿ | ಪ.ಪಂಗಡ | ಪ್ರವರ್ಗ –1 | |
| | | | | | | |
| | | 2ಎ | 2ಬಿ | 3ಎ | 3ಬಿ | |
| | | | | | | |
| 11 | ನೀವು ಈ ಯಾವುದಾದರು ಮೀಸಲಾತಿ ಅಡಿಯಲ್ಲಿ ಬರುತ್ತೀರಾ? (ಸೇರುವ ಮೀಸಲಾತಿಯನ್ನು ✔ ಚಿಹ್ನೆ ಹಾಕುವುದರ ಮೂಲಕ ಗುರುತಿಸಿ ಪ್ರಮಾಣ ಪತ್ರದ ಸ್ವಯಂ ಧೃಡೀಕೃತ ನಕಲನ್ನು ಲಗತ್ತಿಸಬೇಕು) | ಗ್ರಾಮೀಣ | ಕ.ಮಾ.ಅ | ಮಾ.ಸೈ | ಅಂ.ಅ | ಯೋ.ನಿ.ಅ. |
| 12 | ವಿದ್ಯಾರ್ಹತೆ ಃ (ಸ್ವಯಂ ಧೃಢೀಕೃತ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು) | ತೇರ್ಗಡೆಯಾದ ತಿಂಗಳು ಮತ್ತು ವರ್ಷ | ಗರಿಷ್ಟ ಅಂಕಗಳು | ಗಳಿಸಿದ ಅಂಕಗಳು | | |
| | 7ನೇ ತರಗತಿ | | | | | |
| | ಎಸ್.ಎಸ್.ಎಲ್.ಸಿ; | | | | | |
| | ಕನ್ನಡ ಬೆರಳಚ್ಚು (ಕಿರಿಯ ಶ್ರೇಣಿ) | | | | | |
| | ಆಂಗ್ಲ ಬೆರಳಚ್ಚು (ಕಿರಿಯ ಶ್ರೇಣಿ) | | | | | |
| | ಕನ್ನಡ ಬೆರಳಚ್ಚು (ಹಿರಿಯ ಶ್ರೇಣಿ) | | | | | |

| | | | | |
|---|---|---|---|---|
| | ಆಂಗ್ಲ ಬೆರಳಚ್ಚು (ಹಿರಿಯ ಶ್ರೇಣಿ) | | | |
| | ಕನ್ನಡ ಶೀಘ್ರಲಿಪಿ (ಹಿರಿಯ ಶ್ರೇಣಿ) | | | |
| | ಆಂಗ್ಲ ಶೀಘ್ರಲಿಪಿ (ಹಿರಿಯ ಶ್ರೇಣಿ) | | | |
| | ಇತರೆ ಯಾವುದೇ ವಿದ್ಯಾರ್ಹತೆ (ಸೂಚನೆಃ ಅನ್ವಯಿಸುವ ವಿದ್ಯಾರ್ಹತೆಯ ಅಂಕಣಗಳನ್ನು ಮಾತ್ರ ಭರ್ತಿ ಮಾಡುವುದು) | | | |
| 13 | ನೀವು ಪ್ರಸ್ತುತ ಸರ್ಕಾರಿ ಸೇವೆಯಲ್ಲಿರುವಿರಾ? (ಸರ್ಕಾರಿ ಸೇವೆಯಲ್ಲಿದ್ದಲ್ಲಿ ನೇಮಕಾತಿ ಪ್ರಾಧಿಕಾರದಿಂದ ಪಡೆದ ನಿರಾಕ್ಷೇಪಣಾ ಪತ್ರದ ನಕಲನ್ನು ಲಗತ್ತಿಸಬೇಕು) | ಹೌದು | | ಇಲ್ಲ |
| 14 | ಅಭ್ಯರ್ಥಿಯ ಖಾಯಂ ವಿಳಾಸ ಮತ್ತು ದೂರವಾಣಿ ಸಂಖ್ಯೆ | | | |
| 15 | ಅಭ್ಯರ್ಥಿಯ ಅಂಚೆ ವಿಳಾಸ ಮತ್ತು ದೂರವಾಣಿ ಸಂಖ್ಯೆ | | | |
| 16 | ನಿಮ್ಮ ಸ್ವವಿಳಾಸವಿರುವ ರೂ.5/– ರ ಅಂಚೆ ಚೀಟಿ ಅಂಟಿಸಿರುವ ಲಕೋಟೆಯನ್ನು ಲಗತ್ತಿಸಿದ್ದೀರ? | | | |
| 17 | ಐ.ಪಿ.ಓ ಅಥವಾ ಡಿ.ಡಿ. ಸಂಖ್ಯೆ ಮತ್ತು ದಿನಾಂಕ | | | |

ಈ ಮೇಲ್ಕಂಡ ಮಾಹಿತಿಗಳು ಸತ್ಯವಾಗಿರುತ್ತದೆ ಎಂದು ಪ್ರಮಾಣೀಕರಿಸುತ್ತೇನೆ ಹಾಗೂ ಒಂದು ವೇಳೆ ಮೇಲ್ಕಂಡ ಮಾಹಿತಿಗಳು ತಪ್ಪು ಎಂದು ಕಂಡು ಬಂದಲ್ಲಿ ನನ್ನ ಅಭ್ಯರ್ಥಿತ್ವವನ್ನು ರದ್ದುಪಡಿಸಬಹುದೆಂದು ಘೋಷಿಸುತ್ತೇನೆ.

ಸ್ಥಳ ಃ

ದಿನಾಂಕಃ ಅಭ್ಯರ್ಥಿಯ ಸಹಿ.

ಪಿ.ಆರ್.182

**ಕರ್ನಾಟಕ ಲೋಕ ಸೇವಾ ಆಯೋಗ "ಉದ್ಯೋಗ ಸೌಧ" ಬೆಂಗಳೂರು–560001**

**ತಿದ್ದುಪಡಿ**

**ಸಂಖ್ಯೆ: ಇಪ(2)113/2011–12/ಪಿಎಸ್‌ಸಿ, ಬೆಂಗಳೂರು, ದಿನಾಂಕ:16–05–2011**

2010ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶವನ್ನು ದಿನಾಂಕ:26.08.2010ರ ರಾಜ್ಯಪತ್ರದಲ್ಲಿ ಆಯೋಗದ ಅಧಿಸೂಚನೆ ಸಂಖ್ಯೆ: ಇಪ(1) 1899/2009–10/ಪಿಎಸ್‌ಸಿ, ದಿನಾಂಕ:06.08.2010ರಡಿ ಪ್ರಕಟಿಸಲಾಗಿದ್ದು, ಸದರಿ ಅಧಿವೇಶನದಲ್ಲಿ ಅಭ್ಯರ್ಥಿಗಳು ಗಳಿಸಿರುವ ಅಂಕಗಳು ಹಾಗೂ ಬಿ.ಕಾಂ. ಪದವಿಯ ಆಧಾರದ ಮೇಲೆ ವಿನಾಯಿತಿ ನೀಡಿ ಫಲಿತಾಂಶ ಪ್ರಕಟಿಸುವಂತೆ ಅಭ್ಯರ್ಥಿಗಳಿಂದ ಬಂದ ಮನವಿಗಳನ್ನು ಪರಿಶೀಲಿಸಿ ಅರ್ಹ ಅಭ್ಯರ್ಥಿಗಳ ಫಲಿತಾಂಶವನ್ನು ಈ ತಿದ್ದುಪಡಿಯ ಮೂಲಕ ಸಂಬಂಧಿತರ ಮಾಹಿತಿಗಾಗಿ ಪ್ರಕಟಿಸಲಾಗಿದೆ.

**ಅಪೆಂಡಿಕ್ಸ್ "ಬಿ"**

**ಮೈಸೂರು ಕೇಂದ್ರ**

**ಕೋ–ಆಪರೇಶನ್**

ನೋಂದಣಿ ಸಂಖ್ಯೆ: 62169 ಮತ್ತು 62287ನ್ನು ಕೋ–ಆಪರೇಶನ್ ಪತ್ರಿಕೆ–1ರಲ್ಲಿ ಉತ್ತೀರ್ಣ ಎಂದು ಸೇರಿಸಿ ಓದಿಕೊಳ್ಳುವುದು.

**ಡಿ.ಎಸ್. ವಿಶ್ವನಾಥ್,** ಭಾ.ಆ.ಸೇ.
ಕಾರ್ಯದರ್ಶಿ
ಹಾಗೂ ಇಲಾಖಾ ಪರೀಕ್ಷೆಗಳ ನಿಯಂತ್ರಕರು,
ಕರ್ನಾಟಕ ಲೋಕ ಸೇವಾ ಆಯೋಗ.

ಪಿ.ಆರ್.215

**ಕರ್ನಾಟಕ ಲೋಕ ಸೇವಾ ಆಯೋಗ "ಉದ್ಯೋಗ ಸೌಧ" ಬೆಂಗಳೂರು–560001**

**ತಿದ್ದುಪಡಿ**

**ಸಂಖ್ಯೆ: ಇಪ(2)114/2011–12/ಪಿಎಸ್‌ಸಿ, ಬೆಂಗಳೂರು, ದಿನಾಂಕ:16–05–2011**

2009ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶವನ್ನು ದಿನಾಂಕ:08.04.2010ರ ರಾಜ್ಯಪತ್ರದಲ್ಲಿ ಆಯೋಗದ ಅಧಿಸೂಚನೆ ಸಂಖ್ಯೆ: ಇಪ(1) 3542/3639/2009–10/ಪಿಎಸ್‌ಸಿ, ದಿನಾಂಕ:11/23.03.2010ರಡಿ ಪ್ರಕಟಿಸಲಾಗಿದ್ದು, ಸದರಿ ಅಧಿವೇಶನದಲ್ಲಿ

ಅಭ್ಯರ್ಥಿಯು ಗಳಿಸಿರುವ ಅಂಕಗಳು ಹಾಗೂ ಹಿಂದಿನ ಅಧಿವೇಶನದಲ್ಲಿ ಪಡೆದಿರುವ ವಿನಾಯಿತಿಯನ್ನು ಪರಿಗಣಿಸಿ ಫಲಿತಾಂಶ ಪ್ರಕಟಿಸುವಂತೆ ಅಭ್ಯರ್ಥಿಯಿಂದ ಬಂದ ಮನವಿಯನ್ನು ಪರಿಶೀಲಿಸಿ ಸದರಿ ಅಭ್ಯರ್ಥಿಯ ಫಲಿತಾಂಶವನ್ನು ಈ ತಿದ್ದುಪಡಿಯ ಮೂಲಕ ಸದರಿಯವರ ಮಾಹಿತಿಗಾಗಿ ಪ್ರಕಟಿಸಲಾಗಿದೆ.

**ಅಪೆಂಡಿಕ್ಸ್ "ಎ"**

**ಚಾಮರಾಜನಗರ ಕೇಂದ್ರ**

**ಅಕೌಂಟ್ಸ್ ಹೈಯರ್**

ಸಾಮಾನ್ಯ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ: 55402ನ್ನು ಸೇರಿಸಿ ಓದಿಕೊಳ್ಳುವುದು.

**ಡಿ.ಎಸ್. ವಿಶ್ವನಾಥ್,** ಭಾ.ಆ.ಸೇ.
ಕಾರ್ಯದರ್ಶಿ
ಹಾಗೂ ಇಲಾಖಾ ಪರೀಕ್ಷೆಗಳ ನಿಯಂತ್ರಕರು,
ಕರ್ನಾಟಕ ಲೋಕ ಸೇವಾ ಆಯೋಗ.

ಪಿ.ಆರ್.216

**FORM-1**

**(See Rule 9)**

**EDUCATION DEPARTMENT**

**OFFICE OF THE DEPARTMENT OF PUBLIC INSTRUCTIONS DDPI, BIJAPUR**

**NOTIFICATION**

Sri Basappa S/o Doddayamanappa Chalawadi working as Head-Master, Govt. High School, Buranapur Tq: & Dist: Bijapur in the Education Department Office of the Deputy Director of Public instructions is permitted to change his name to **BASAVARAJ S/O DODDAYAMANAPPA BEVINAMATTI.**

Deputy Director of Public Instructions,
Bijapur.

PD-57

**FORM-IV**

**(See Rule 12)**

**NOTICE**

It is hereby notified that the undersigned has changed his/her name from **VENKATESH YALLAPPA HARIJAN to VENKATESH YALLAPPA DODDAMANI.**

PD-58

**VENKATESH YALLAPPA HARIJAN**

**ಕರ್ನಾಟಕ ಸರ್ಕಾರ**

**ಪೊಲೀಸ್ ಇಲಾಖೆ**

**ಪೊಲೀಸ್ ಅಧೀಕ್ಷಕರ ಕಛೇರಿ, ಕರಾವಳಿ ಕಾವಲು ಪೊಲೀಸ್, ಉಡುಪಿ.**

**ಅಧಿಸೂಚನೆ**

**ಸಂಖ್ಯೆ: /ಸಿಬ್ಬಂದಿ-1/ಸಿ.ಎಸ್.ಪಿ/2011-12, ದಿನಾಂಕ: 28/05/2011.**

**ವಿಷಯ:** ಕರಾವಳಿ ಕಾವಲು ಪೊಲೀಸ್ ಪಡೆಯಲ್ಲಿನ ತಾಂತ್ರಿಕ ಹುದ್ದೆಗಳನ್ನು ಗುತ್ತಿಗೆ ಆಧಾರದಲ್ಲಿ ನೇಮಕ ಮಾಡುವ ಕುರಿತು.

ಕರಾವಳಿ ಕಾವಲು ಪೊಲೀಸ್ ಘಟಕ ಉಡುಪಿಯಲ್ಲಿನ ಬೋಟ್‌ಗಳನ್ನು ನಡೆಸಲು ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ/259/ಪಿಓಪಿ/2007 ದಿನಾಂಕ 18/03/2008ರಲ್ಲಿ 66 ವಿವಿಧ ದರ್ಜೆಯ ತಾಂತ್ರಿಕ ಹುದ್ದೆಗಳನ್ನು ಮಂಜೂರು ಮಾಡಲಾಗಿದೆ. ಪ್ರಸ್ತುತ ಪೊಲೀಸ್ ಇಲಾಖೆಯಲ್ಲಿ ಮೇಲ್ಕಂಡ 66 ವಿವಿಧ ತಾಂತ್ರಿಕ ಹುದ್ದೆಗಳಿಗೆ ಅರ್ಹವಾದ ತಾಂತ್ರಿಕ ವಿದ್ಯಾರ್ಹತೆ, ತರಬೇತಿ ಮತ್ತು ಅನುಭವ ಹೊಂದಿರುವ ಸಿಬ್ಬಂದಿಗಳು ಇಲ್ಲದೇ ಇರುವ ಹಿನ್ನಲೆಯಲ್ಲಿ, ನಿವೃತ್ತ ನೌಕಾ ಅಧಿಕಾರಿಗಳು ಮತ್ತು ನಿವೃತ್ತ ಕೋಸ್ಟ್‌ಗಾರ್ಡ್ ಅಧಿಕಾರಿಗಳು ಮತ್ತು ಸಿಬ್ಬಂದಿಗಳನ್ನು ಮೊದಲ ಹಂತದಲ್ಲಿ ಐದು (5) ವರ್ಷಗಳ ಅವಧಿಗೆ ಗುತ್ತಿಗೆ ಆಧಾರದಲ್ಲಿ ನೇಮಕ ಮಾಡಿಕೊಳ್ಳಲು ಸರ್ಕಾರವು ಆದೇಶ ಸಂಖ್ಯೆ: ಹೆಚ್‌ಡಿ/107/ಪಿಓಪಿ/2009 ದಿನಾಂಕ 10/07/2009 ಮತ್ತು ಹೆಚ್‌ಡಿ/94/ಪಿಓಪಿ/2010 ದಿನಾಂಕ 13/09/2010ರಲ್ಲಿ ಅನುಮತಿ ನೀಡಿದೆ.

ಈ ಹಿನ್ನಲೆಯಲ್ಲಿ ವಿವಿಧ ತಾಂತ್ರಿಕ ಹುದ್ದೆಗಳಿಗೆ ಅರ್ಹರಾದ ನಿವೃತ್ತ ನೌಕಾ/ಕೋಸ್ಟ್‌ಗಾರ್ಡ್ ಅಧಿಕಾರಿಗಳು ಮತ್ತು ಸಿಬ್ಬಂದಿಗಳಿಂದ ಭರ್ತಿ ಮಾಡಲು ವಿಶೇಷ ನೇಮಕಾತಿ ಸಮಿತಿಯನ್ನು ಅಧಿಸೂಚನೆ ಸಂಖ್ಯೆ: ಕಾಮತ್ತುಸು/ಟಿಎಸ್‌ಸಿ-2/207/2006 ದಿನಾಂಕ 06/09/2009ರಂದು ರಚಿಸಲಾಗಿದೆ. ಸದರಿ ವಿಶೇಷ ನೇಮಕಾತಿ ಸಮಿತಿಯು 13 ವಿವಿಧ ದರ್ಜೆಯ ತಾಂತ್ರಿಕ ಸಿಬ್ಬಂದಿಗಳನ್ನು ಆಯ್ಕೆ ಮಾಡಿ ನೇಮಕಾತಿ ಮಾಡಿಕೊಂಡಿದೆ.

ಉಳಿದ ಈ ಕೆಳಗಿನ ತಾಂತ್ರಿಕ ಹುದ್ದೆಗಳಿಗೆ ಅರ್ಹರಾದ ನಿವೃತ್ತ ನೌಕಾ/ಕೋಸ್ಟ್‌ಗಾರ್ಡ್ ಅಧಿಕಾರಿಗಳು ಮತ್ತು ಸಿಬ್ಬಂದಿಗಳಿಂದ ಗುತ್ತಿಗೆ ಆಧಾರದ ಮೇಲೆ ಮೌಖಿಕ ಸಂದರ್ಶನ ನಡೆಸಿ ಭರ್ತಿ ಮಾಡಲು ವಿಶೇಷ ನೇಮಕಾತಿ ಸಮಿತಿಯು ನಿರ್ಧರಿಸಿದ್ದು, ದಿನಾಂಕ 13/06/2011, 14/06/2011

ಮತ್ತು 15/06/2011ರಂದು ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರ ಕಛೇರಿ, ಆಂತರಿಕ ಭದ್ರತೆ ವಿಭಾಗ, ನಂ.60, ರಿಚ್‌ಮಂಡ್ ರಸ್ತೆ (ಕೆ.ಎಸ್.ಆರ್.ಪಿ 1ನೇ ಪಡೆ ಆವರಣ), ಬೆಂಗಳೂರು– 560025 ರಲ್ಲಿ ನಡೆಯಲಿರುವ ಮೌಖಿಕ ಸಂದರ್ಶನಕ್ಕೆ ಇಚ್ಛೆಯುಳ್ಳ ಅಭ್ಯರ್ಥಿಗಳು ಸ್ವಂತ ಖರ್ಚಿನಲ್ಲಿ ಹಾಜರಾಗುವುದು.

| ಕ್ರ.ಸಂ. | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ | ಶ್ರೇಣಿ (ಗ್ರೇಡ್) |
|---|---|---|---|
| 1 | ಮೋಟಾರ್ ಲಾಂಚ್ ಇಂಜಿನಿಯರ್ | 01 | ಪೊಲೀಸ್ ಇನ್ಸ್‌ಪೆಕ್ಟರ್ ಗ್ರೇಡ್ |
| 2 | ಕ್ಯಾಪ್ಟನ್ | 11 | ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಗ್ರೇಡ್ |
| 3 | ಸಹಾಯಕ ಕ್ಯಾಪ್ಟನ್ | 14 | ಸಹಾಯಕ ಪೊಲೀಸ್ ಇನ್ಸ್‌ಪೆಕ್ಟರ್ ಗ್ರೇಡ್ |
| 4 | ಇಂಜಿನ್ ಡ್ರೈವರ್ | 10 | ಹೆಚ್.ಸಿ. ಗ್ರೇಡ್ |
| 5 | ಖಲಾಸಿಗಳು | 12 | ಪಿ.ಸಿ.ಗ್ರೇಡ್ |
| 6 | ಮೆಕ್ಯಾನಿಕ್ | 05 | ಎ.ಎಸ್.ಐ. ಗ್ರೇಡ್ |
| | ಒಟ್ಟು | **53** | **ಹುದ್ದೆಗಳು** |

ಹುದ್ದೆಗೆ ವಯೋಮಿತಿ, ಅರ್ಹತೆ ಮತ್ತು ಕ್ರೂಢೀಕೃತ ವೇತನ ಇತ್ಯಾದಿಗಳ ವಿವರ ಈ ಕೆಳಗಿನಂತಿದೆ.

| SL No | Post | Maximum age Limit and experience | Eligibility | | Consolidated Salary per month in Rs. | Date of Interview |
|---|---|---|---|---|---|---|
| | | | Navy | Coast Guard | | |
| 1 | Motor Launch Engineer | Maximum 50 years Minimum 10 years of experience. | Chief ERA /Mech ERA | SE/USE/PSE | 31,000/- | 13/06/2011 |
| 2 | Captain | Maximum 45 years Minimum 5 years of experience. | Chief Petty Officer/ Master Chief Petty Officer ll and l st class ,preferably RP sailors(Radar Plotter having experience of Navigation) | Adhikari/Uttam Adhikari/ Pradhan Adhikari (Radar Plotter having experience of Navigation) | 29,000/- | |
| 3 | Assistant Captain | Maximum 45 years Minimum 5 Years of experience | Petty Officer to Chief Petty Officer. (Radar Plotter having experience of Navigation) | P/Nvk to Adhikari (Radar Plotter having experience of Navigation) . | 22,000/- | 14/06/2011 |
| 4 | Engine Driver | Maximum 45 years Minimum 5 Years of experience | Petty Officer from Mechanical Engineering Branch . | P/Nvk. from Mechanical Engineering Branch . | 20,000/- | |
| 5 | Khalasi | Maximum 45 years Minimum 5 Years of experience | Sailor | Sailor. | 18,000/- | 15/06/2011 |

| SL No | Post | Maximum age Limit and experience | Eligibility | | Consolidated Salary per month in Rs. | Date of Interview |
|---|---|---|---|---|---|---|
| | | | Navy | Coast Guard | | |
| 6 | Motor Launch Mechanic | Maximum 55 years Minimum 5 Years of experience | Petty Officer to Chief Petty Officer. from Mechanical Engineering Branch. | P/Nvk to Adhikari. from Mechanical Engineering Branch. | 22,000/- | |

ಮೂಲ ವೈದ್ಯಕೀಯ ಪರೀಕ್ಷೆಯಲ್ಲಿ ಅರ್ಹರಾಗುವ ಅಭ್ಯರ್ಥಿಗಳನ್ನು ಪೊಲೀಸ್ ವೆರಿಫಿಕೇಷನ್ ಗೊಳಪಟ್ಟು ನೇಮಕಾತಿಗಾಗಿ ತಾತ್ಕಾಲಿಕ ಪಟ್ಟಿಯಲ್ಲಿ ಸೇರಿಸಲಾಗುವುದು.

ಅಂತಿಮವಾಗಿ ಆಯ್ಕೆಯಾದ ಅಭ್ಯರ್ಥಿಗಳನ್ನು ಅನುಬಂಧದಲ್ಲಿನ ಷರತ್ತುಗಳಿಗೆ ಒಳಪಟ್ಟಂತೆ ಗುತ್ತಿಗೆ ಆಧಾರದಲ್ಲಿ ನೇಮಕಾತಿ ಮಾಡಲು ಕ್ರಮ ಕೈಗೊಳ್ಳಲಾಗುವುದು.

ಸಂದರ್ಶನಕ್ಕೆ ಬರುವಾಗ್ಗೆ ಅಭ್ಯರ್ಥಿಗಳು ಕೆಳಕಂಡ ದಾಖಲೆಗಳನ್ನು ತಪ್ಪದೇ ತರತಕ್ಕದ್ದು.

1) ನೌಕಾ ಪಡೆ/ ಕೋಸ್ಟ್‌ಗಾರ್ಡ್‌ನಿಂದ ಡಿಸ್‌ಚಾರ್ಜ್ ಸರ್ಟಿಫೀಕೇಟ್.
2) ಪೆನ್‌ಷನ್ ಆರ್ಡರ್ ಪ್ರತಿ/ ನಿವೃತ್ತಿ ವೇತನದ ಆದೇಶದ ಪ್ರತಿ.
3) ವಿದ್ಯಾರ್ಹತೆಯ ಪ್ರಮಾಣ ಪತ್ರಗಳು.
4) ತಾಂತ್ರಿಕ ಪರೀಕ್ಷೆಗಳ ಪ್ರಮಾಣ ಪತ್ರಗಳು (ಇದ್ದಲ್ಲಿ).
5) ಟ್ರಾನ್ಸ್‌ಫರ್ ಸರ್ಟಿಫಿಕೇಟ್/ ಎಸ್.ಎಸ್.ಎಲ್.ಸಿ ಮಾರ್ಕ್ಸ್ ಕಾರ್ಡ್/ ಪಾಸ್‌ಪೋರ್ಟ್ (ವಯಸ್ಸಿನ ದೃಢೀಕರಣಕ್ಕಾಗಿ).

ಹೆಚ್ಚಿನ ಮಾಹಿತಿ ಬೇಕಿದ್ದಲ್ಲಿ, ಸದಸ್ಯ ಕಾರ್ಯದರ್ಶಿ ಮತ್ತು ಎಸ್.ಪಿ., ಸಿ.ಎಸ್.ಪಿ. ಉಡುಪಿಯವರಿಂದ ಪಡೆಯಬಹುದಾಗಿದೆ.

ಸದಸ್ಯ ಕಾರ್ಯದರ್ಶಿ,
ವಿಶೇಷ ನೇಮಕಾತಿ ಸಮಿತಿ ಮತ್ತು ಪೊಲೀಸ್ ಅಧೀಕ್ಷಕರು,
ಕರಾವಳಿ ಕಾವಲು ಪೊಲೀಸ್, ಉಡುಪಿ.

**ಅನುಬಂಧ**

**ಗುತ್ತಿಗೆ ಆಧಾರದ ನೇಮಕಾತಿಯ ಬಗ್ಗೆ ಷರತ್ತು ಮತ್ತು ನಿಬಂಧನೆಗಳು**

1) ಗುತ್ತಿಗೆ ನೇಮಕಾತಿ ಅವಧಿ ಪ್ರಥಮ ಹಂತದಲ್ಲಿ 5 ವರ್ಷಗಳ ಅವಧಿಗೆ ತಾತ್ಕಾಲಿಕವಾಗಿರುತ್ತದೆ.
2) ವಾರ್ಷಿಕ 15 ದಿನಗಳ ಸಾಂದರ್ಭಿಕ ರಜೆಯನ್ನು ಮಾತ್ರ ಪಡೆಯಲು ಅರ್ಹರಾಗಿರುತ್ತಾರೆ.
3) ಸಕ್ಷಮ ಪ್ರಾಧಿಕಾರದ ಅನುಮತಿ ಪಡೆಯದೆ ಅನಧಿಕೃತ ಗೈರುಹಾಜರಾದಲ್ಲಿ ಗುತ್ತಿಗೆ ಆಧಾರದ ನೇಮಕಾತಿಯು ರದ್ದಾಗುತ್ತದೆ.
4) ಒಪ್ಪಂದದ ಷರತ್ತು ಮತ್ತು ನಿಬಂಧನೆಗಳಲ್ಲಿ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯಕ್ಕೆ ಅಂದರೆ ವೇತನ ಬಡ್ತಿ, ಪದೋನ್ನತಿ, ಪಿಂಚಣಿ, ಇತ್ಯಾದಿ ಸೌಲಭ್ಯಗಳಿಗೆ ಸದರಿ ಗುತ್ತಿಗೆ ನೌಕರರು ಅರ್ಹರಾಗಿರುವುದಿಲ್ಲ.
5) ನೌಕರರ ದುರ್ವರ್ತನೆ, ನಿರ್ಲಕ್ಷತೆ ನಿಮಿತ್ತ ಸರ್ಕಾರಕ್ಕೆ ಸಂಭವಿಸಬಹುದಾದ ಎಲ್ಲಾ ನಷ್ಟಗಳನ್ನು ಸರ್ಕಾರಕ್ಕೆ ಸದರಿ ನೌಕರರು ಭರಿಸಿಕೊಡಲು ಬದ್ಧರಾಗಿರತಕ್ಕದ್ದು.
6) ಒಪ್ಪಂದದ ನೇಮಕಾತಿಯನ್ನು ಯಾವುದೇ ಕಾರಣಕ್ಕೂ ಖಾಯಂ ಎಂದು ಪರಿಗಣಿಸುವುದಿಲ್ಲ.
7) ನೌಕರರು ತಮ್ಮ ಕರ್ತವ್ಯ ನಿರ್ವಹಣೆಗಳನ್ನು ಶ್ರದ್ಧೆ, ಭಕ್ತಿ ಮತ್ತು ಆಸಕ್ತಿಯಿಂದ ನಿರ್ವಹಿಸತಕ್ಕದ್ದು.
8) ತಮ್ಮ ಕರ್ತವ್ಯವನ್ನು ಪಾಲಿಸುತ್ತಿರುವಾಗ ಅಥವಾ ನಿರ್ವಹಿಸುತ್ತಿರುವಾಗ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.
9) ನೇಮಕಾತಿ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ 7 ದಿನಗಳೊಳಗಾಗಿ 50 ರೂ ಮೌಲ್ಯದ ಛಾಪಾ ಕಾಗದದಲ್ಲಿ ಗುತ್ತಿಗೆ ಆಧಾರದ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನೊಳಗೊಂಡಿರುವ ಕರಾರು ಪತ್ರವನ್ನು ನೀಡುವುದು.
10) ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ.

**GOVERNMENT OF KARNATAKA**

**POLICE DEPARTMENT**

**Office of the Superintendent of Police, Coastal Security Police, Udupi**

**NOTIFICATION**

**No. EST-1/TR2/CSP/U/2011, Date: 28/05/2011**

**SUB:** Recruitment of technical staff for the Coastal Security Police, Udupi on contract basis.

Govt. of Karnataka has sanctioned 66 different post of technical staff for manning 5 ton and 12 ton interceptor boat vide Govt. order No. HD/259/POP/2007 dtd: 18-03-2009.

As there are no technically qualified, trained or experienced staff in the department at present, the Govt. of Karnataka has given permission for the appointment of technical staff from retired Indian Naval personnel and Indian Coast Guard personnel on contract basis for a period of five years in the first instance vide Govt. order No.HD/107/POP/09 dtd: 10-07-2009 and No.HD/94/POP/2010 dtd: 13-09-2010.

On the basis of this Govt. order a Special Recruitment Committee has been constituted by the DG & IGP, Karnataka State Bangalore vide Notification No.L &O-TSC-2/207/2006 dtd: 06-09-09 and special recruitment committee has selected and appointed 13 different posts of technical staff.

Now the Special Recruitment Committee has decided to select suitable, qualified and experienced retired personnel from Navy and Coast Guard who are willing to work in the remaining following technical posts by conducting an interview on 13/06/2011, 14/06/2011 & 15/06/2011 at the Office of the Additional Director General of Police, Internal Security Division, No.60 Richmond Road (I[st] Battalion KSRP Premises), Bangalore-560 025. The candidates have to attend the interview at their own expense.

| SL No. | Designation of the Post | No, of Posts | Grade |
|---|---|---|---|
| 1 | Motor Launch Engineer | 01 | Police Inspector Grade |
| 2 | Boat Captain | 11 | Police Sub Inspector Grade |
| 3 | Assistant Captain | 14 | Asst. Police Sub Inspector Grade |
| 4 | Engine Driver | 10 | Police Head Constable Grade |
| 5 | Khalasi | 12 | Police Constable Grade |
| 6 | Motor Launch Mechanic | 05 | Asst. Police Sub Inspector Grade |
| | **Total** | **53** | |

The details of age, eligibility, consolidated salary etc are as under.

| Sl. No. | Post | Maximum age Limit and experience | Eligibility | | Consolidated Salary per month in Rs. | Date of Interview |
|---|---|---|---|---|---|---|
| | | | Navy | Coast Guard | | |
| 1 | Motor Launch Engineer | Maximum 50 years<br>Minimum 10 years of experience. | Chief ERA<br>/Mech ERA | SE/USE/PSE | 31,000/- | 13/06/2011 |
| 2 | Captain | Maximum 45 years<br>Minimum 5 years of experience. | Chief Petty Officer/ Master Chief Petty Officer ll and l st class ,preferably RP sailors(Radar Plotter having experience of Navigation) | Adhikari/Uttam Adhikari/ Pradhan Adhikari<br>(Radar Plotter having experience of Navigation) | 29,000/- | |
| 3 | Assistant Captain | Maximum 45 years<br>Minimum 5 Years of experience | Petty Officer to Chief Petty Officer.<br>(Radar Plotter having experience of Navigation) | P/Nvk to Adhikari<br>(Radar Plotter having experience of Navigation)<br>. | 22,000/- | 14/06/2011 |
| 4 | Engine Driver | Maximum 45 years<br>Minimum 5 Years of experience | Petty Officer<br>from Mechanical Engineering Branch . | P/Nvk.<br>from Mechanical Engineering Branch . | 20,000/- | |

| Sl. No. | Post | Maximum age Limit and experience | Eligibility | | Consolidated Salary per month in Rs. | Date of Interview |
|---|---|---|---|---|---|---|
| | | | Navy | Coast Guard | | |
| 5 | Khalasi | Maximum 45 years Minimum 5 Years of experience | Sailor | Sailor. | 18,000/- | 15/06/2011 |
| 6 | Motor Launch Mechanic | Maximum 55 years Minimum 5 Years of experience | Petty Officer to Chief Petty Officer. from Mechanical Engineering Branch. | P/Nvk to Adhikari. from Mechanical Engineering Branch. | 22,000/- | |

The willing candidates who appear for the interview and who qualify the basic medical examination will be short listed for appointment, subject to police verification.

The selected candidates will be taken on contract basis subject to the terms and conditions published in this notification.

The candidates shall appear for the interview with the following original documents:-

1) Discharge certificates from Navy/Coast Guard.
2) Pension order copy/file.
3) Certified copy of educational qualification.
4) Certified copy of technical qualification ( if any)
5) Transfer certificate /SSLC marks card/Passport for proof of age.

Further details if any may be ascertained from the Member Secretary and Superintendent of Police, CSP, Udupi.

Member Secretary
Special Recruitment committee &
Superintendent of Police,
Coastal Security Police, Udupi.

**ANNEXURE**

**Terms and Conditions**

1. Contract appointment is for a period of five years. They are entitled for consolidated pay only on monthly basis and their salary will not be revised.
2. Entitled for 15 days casual leave per year.
3. Contract appointment will be cancelled if found unauthorizedly absent from duty without the approval of competent authority.
4. Not entitled for any other benefits like increment, promotion, pension etc, except the terms and conditions mentioned in the contract.
5. The loss incurred to Govt. by the employee due to misconduct, negligence should be borne by the employee.
6. This contract appointment is purely temporarily.
7. He should perform duties and functions with care, dedication and interest.
8. Secrecy should be maintained for available or authorized information collected during performance of duties.
9. He should execute an agreement in stamp paper worth Rs. 50/- mentioning the terms and conditions of the appointment within 7 days of receipt of the order.
10. The contract appointment will stand cancelled if the terms and conditions of the agreement are violated.

Member Secretary
PR-220 Special Recruitment committee &
Superintendent of Police,
Coastal Security Police, Udupi.

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ ಮಂಡ್ಯ ವಿಭಾಗ, ಮಂಡ್ಯ

**"ಪ್ರಕಟಣೆ"**

**ಸಂ.ಸಿ2/ಅ.ಗುತ್ತಿಗೆದಾರರ/ನೋಂದಣಿ/ಸಿಆರ್–7/2011–12, ದಿನಾಂಕ:18.05.2011**

**ವಿಷಯ:** 2011–12ನೇ ಸಾಲಿನಲ್ಲಿ ಅರಣ್ಯ ಗುತ್ತಿಗೆದಾರರ ನೋಂದಣಿ ಕುರಿತು.

2011–12ನೇ ಸಾಲಿನಲ್ಲಿ ಮಂಡ್ಯ ವಿಭಾಗ ವ್ಯಾಪ್ತಿಯಲ್ಲಿ ಅರಣ್ಯ ಅಭಿವೃದ್ಧಿ ಹಾಗೂ ಇತರೆ ಸಿವಿಲ್ ಕಾಮಗಾರಿಗಳನ್ನು ಕೈಗೊಳ್ಳಲು ಗುತ್ತಿಗೆದಾರರು ನೋಂದಣಿಯನ್ನು ಮಾಡಿಕೊಳ್ಳಬೇಕಾಗಿರುತ್ತದೆ. 2010–11ನೇ ಸಾಲಿನಲ್ಲಿ ಅರಣ್ಯ ಕಾಮಗಾರಿಗಳನ್ನು ಕೈಗೊಳ್ಳಲು ಟೆಂಡರ್ ಪ್ರಕಟಣೆಯನ್ನು ಹೊರಡಿಸಿದ ನಂತರ ಹಲವಾರು ಜನರು ಈ ಕಛೇರಿಗೆ ಹಾಜರಾಗಿ ಅರಣ್ಯ ಗುತ್ತಿಗೆದಾರರಾಗಿ ನೋಂದಾಯಿಸಿಕೊಂಡು ಟೆಂಡರ್ ದಿನದಂದು ಕಛೇರಿಗೆ ಹಾಜರಾಗಿ ಟೆಂಡರ್ ಫಾರಂಗಳನ್ನು ಪಡೆದು, ನಂತರ ಟೆಂಡರ್ ಹಾಕದೆ ಕೇವಲ ಎರಡು ಅಥವಾ ಮೂರು ಗುತ್ತಿಗೆದಾರರು ಮಾತ್ರ ಟೆಂಡರ್‌ನಲ್ಲಿ ಭಾಗವಹಿಸಿರುತ್ತಾರೆ. ಇದರಿಂದ ಟೆಂಡರ್ ಹಾಕದೆ ರಿಂಗ್ ಫಾರ್ಮ ಮಾಡಿರಬಹುದೆಂಬ ಶಂಕೆ ಉಂಟಾಗಿರುತ್ತದೆ. ಅಲ್ಲದೆ ಟೆಂಡರ್‌ನಲ್ಲಿ ಪಡೆದುಕೊಂಡ ಅರಣ್ಯ ಅಭಿವೃದ್ಧಿ ಮತ್ತು ಸಿವಿಲ್ ಕಾಮಗಾರಿಗಳನ್ನು ನಿಗದಿತ ಸಮಯದೊಳಗೆ ಪೂರೈಸದಿರುವುದರಿಂದ ಈ ವಿಭಾಗಕ್ಕೆ ಹಂಚಿಕೆ ಮಾಡಿದ್ದ ಅನುದಾನವನ್ನು ಅಧ್ಯರ್ಪಣೆ ಮಾಡಬೇಕಾದ ಸಂದರ್ಭ ಉಂಟಾಗಿ ಕಾಮಗಾರಿಗಳು ಅನುಷ್ಠಾನಗೊಳ್ಳದೆ ನಿಗದಿತ ಗುರಿಯನ್ನು ಸಾಧಿಸಲು ಸಾಧ್ಯವಾಗಿರುವುದಿಲ್ಲ. ಆದುದರಿಂದ ಇನ್ನು ಮುಂದೆ ಈ ವಿಭಾಗದಲ್ಲಿ ಅರಣ್ಯ ಅಭಿವೃದ್ಧಿ ಹಾಗೂ ಸಿವಿಲ್ ಕಾಮಗಾರಿಗಳನ್ನು ಟೆಂಡರ್ ಮುಖಾಂತರ ಸಮರ್ಪಕವಾಗಿ ಅನುಷ್ಠಾನ ಮಾಡುವ ಸಲುವಾಗಿ 2011–12ನೇ ಸಾಲಿನಲ್ಲಿ ಈ ವಿಭಾಗದಲ್ಲಿ ಅರಣ್ಯ ಗುತ್ತಿಗೆದಾರರಾಗಿ ನೋಂದಾಯಿಸಿಕೊಳ್ಳಲು ಇಚ್ಛೆ ಉಳ್ಳವರು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಅರಣ್ಯ ಗುತ್ತಿಗೆದಾರರಾಗಿ ನೋಂದಾಯಿಸಿಕೊಳ್ಳಲು ಸೂಚಿಸಲಾಗಿದೆ.

1. ನೋಂದಣಿ ಅರ್ಜಿಯನ್ನು ನಿಗದಿತ ನಮೂನೆ ಸಂಖ್ಯೆ 7 (ರೂಲ್ 72(2)) ರಲ್ಲಿ ಸಲ್ಲಿಸತಕ್ಕದ್ದು, ಹಾಗೂ ಅರ್ಜಿಯೊಂದಿಗೆ ರೂ.37/–ನ್ನು ಹೊಸದಾಗಿ ನೋಂದಣಿಗೆ ನೋಂದಣಿ ಶುಲ್ಕವನ್ನು ರಾಷ್ಟ್ರೀಕೃತ ಬ್ಯಾಂಕ್‌ನಿಂದ ಉಪ ಅರಣ್ಯ ಸಂರಕ್ಷಣಾಧಿಕಾರಿ, ಮಂಡ್ಯ ವಿಭಾಗ, ಮಂಡ್ಯರವರ ಹೆಸರಿಗೆ ಡಿಡಿಯನ್ನು ತೆಗೆದು ಲಗತ್ತಿಸತಕ್ಕದ್ದು.
2. ಕನಿಷ್ಠ ರೂ.100000/–ಗಳಿಗೆ ಸಾಲ್‌ವೆನ್ಸಿ ದೃಢೀಕರಣವನ್ನು ಸಲ್ಲಿಸತಕ್ಕದ್ದು.
3. ಮೌಲ್ಯ ವರ್ಧಿತ ತೆರಿಗೆ ನೋಂದಣಿ ಪತ್ರದ ಪ್ರತಿ ಹಾಗೂ ದಿನಾಂಕ:31.03.2011 ರವರೆಗಿನ ತೆರಿಗೆ ಬಾಕಿ ಇಲ್ಲದಿರುವ ಕುರಿತು ದೃಢೀಕರಣವನ್ನು ಸಲ್ಲಿಸತಕ್ಕದ್ದು.
4. ದಿನಾಂಕ:31.03.2011 ರವರೆಗಿನ ವೃತ್ತಿ ತೆರಿಗೆ ದೃಢೀಕರಣ ಪತ್ರ ಸಲ್ಲಿಸತಕ್ಕದ್ದು.
5. 2010–11ನೇ ಸಾಲಿನ ಆದಾಯ ತೆರಿಗೆ ವಿವರವನ್ನು 2011ರಲ್ಲಿ ಫೈಲ್ ಮಾಡಿರುವ ಪ್ರತಿಯನ್ನು ಸಲ್ಲಿಸತಕ್ಕದ್ದು.
6. ಭ್ರಷ್ಟಚಾರ ನಿಯಂತ್ರಣಾ ಕಾಯ್ದೆ 1988ರಂತೆ ಒಳಸಂಚು ನಿರೋಧ ಪ್ರಮಾಣ ಪತ್ರವನ್ನು ನಮೂನೆಯಲ್ಲಿ ಸಲ್ಲಿಸತಕ್ಕದ್ದು, (ನಮೂನೆಯನ್ನು ಈ ಕಛೇರಿಯಿಂದ ಪಡೆದುಕೊಳ್ಳಬಹುದು)
7. ಗುತ್ತಿಗೆದಾರರ ನೋಂದಣಿಯನ್ನು ದಿನಾಂಕ:18.05.2011 ರಿಂದ ದಿನಾಂಕ:18.06.2011 ರವರೆಗೆ ಮಾತ್ರ ಸ್ವೀಕರಿಸಲಾಗುವುದು ನಂತರದ ಅವಧಿಯಲ್ಲಿ ಸಲ್ಲಿಸುವ ಯಾವುದೇ ನೋಂದಣಿ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ. ಮೇಲ್ಕಂಡ ಷರತ್ತುಗಳನ್ನು ಸರಿಯಾಗಿ ಪೂರೈಸಿದವರನ್ನು ಅರಣ್ಯ ಗುತ್ತಿಗೆದಾರರಾಗಿ ದಿನಾಂಕ:19.06.2011ರಂದು ನೋಂದಣಿ ಮಾಡಲಾಗುವುದು.
8. ದಿನಾಂಕ:18.06.2011ರ ನಂತರ 2011–12ನೇ ಸಾಲಿನಲ್ಲಿ ಗುತ್ತಿಗೆದಾರರಾಗಿ ನೋಂದಣಿ ಕೋರಿ ಸಲ್ಲಿಸುವ ಅರ್ಜಿಗಳನ್ನು ಯಾವುದೇ ಕಾರಣಕ್ಕೂ ಪರಿಗಣಿಸುವುದಿಲ್ಲ.
9. ಒಂದು ವೇಳೆ ಗುತ್ತಿಗೆದಾರರ ಮತ್ತು ಈ ಕಛೇರಿಯ ನಡುವೆ ಯಾವುದೇ ವಿವಾದ ಉಂಟಾದಲ್ಲಿ ಅಂತಿಮವಾಗಿ ವಿವಾದವನ್ನು ಬಗೆಹರಿಸಲು ಅಧಿಕಾರವನ್ನು ಅರಣ್ಯ ಸಂರಕ್ಷಣಾಧಿಕಾರಿಗಳು, ಮೈಸೂರು ವೃತ್ತ, ಮೈಸೂರುರವರು ಅಧಿಕೃತ ಅಧಿಕಾರಿಯಾಗಿದ್ದು, ಅವರ ಆದೇಶ ಅಂತಿಮವಾಗಿರುತ್ತದೆ.
10. ಅರಣ್ಯ ಗುತ್ತಿಗೆದಾರರ ನೋಂದಣಿಗಾಗಿ ಅರ್ಜಿ ಸಲ್ಲಿಸುವವರು ಈ ಹಿಂದೆ ಅರಣ್ಯ ಅಭಿವೃದ್ಧಿ ಕಾಮಗಾರಿಗಳನ್ನು ನಿರ್ವಹಿಸಿದ ಬಗ್ಗೆ ಸಂಬಂಧಿಸಿದ ಅರಣ್ಯಾಧಿಕಾರಿಗಳಿಂದ ದೃಢೀಕರಣ ಪತ್ರ ಪಡೆದು ಸಲ್ಲಿಸತಕ್ಕದ್ದು.

ಉಪ ಅರಣ್ಯ ಸಂರಕ್ಷಣಾಧಿಕಾರಿ,

ಪಿ.ಆರ್.207 ಮಂಡ್ಯ ವಿಭಾಗ, ಮಂಡ್ಯ.

## ನೋಂದಣಿ ಮತ್ತು ಮುದ್ರಾಂಕ ಇಲಾಖೆ

**ವಿಷಯ:** ಜವಾನರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಜವಾನರೆಂದು ನೇಮಕಗೊಂಡು ಕೆಲಸಕ್ಕೆ ಹಾಜರಾಗದೇ ಇರುವ ಬ್ಯಾಕ್‌ಲಾಗ್ ಅಭ್ಯರ್ಥಿಗಳ ನೇಮಕಾತಿ ಆದೇಶವನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ: DPAR 13 SBC 2001 ದಿನಾಂಕ:21.11.2001 ರನ್ವಯ ಪ್ರಕಟಿಸಿರುವ ಬ್ಯಾಕ್‌ಲಾಗ್ ನೇಮಕಾತಿ ನಿಯಮಗಳು 2001.

2) ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರ ಅಲಾಟ್‌ಮೆಂಟ್ ಆರ್ಡರ್ ನಂಬರ್: ಸಿಬ್ಬಂದಿ–2–235/03–04 ದಿನಾಂಕ:21.09.2010.

3) ಈ ಕಛೇರಿಯ ನೇಮಕಾತಿ ಆದೇಶ ಸಂಖ್ಯೆ: ಸಿಬ್ಬಂದಿ 39/2010–11 ದಿನಾಂಕ:14.02.2011.

4) ಮಹಾನಂದ ಸದಾಶಿವಪ್ಪ ನಾಯಕ ಇವರ ಮನವಿ ಪತ್ರ ದಿನಾಂಕ:29.01.2011.

**ಪ್ರಸ್ತಾವನೆ:**

ಉಲ್ಲೇಖ (2)ರ ಅಲಾಟ್‌ಮೆಂಟ್ ಆರ್ಡರ್ ಮೇರೆಗೆ ಉಲ್ಲೇಖ (3)ರ ಈ ಕಛೇರಿಯ ನೇಮಕಾತಿ ಆದೇಶದಲ್ಲಿ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಅವರ ಹೆಸರಿನ ಮುಂದೆ ನಮೂದಿಸಿರುವ ಕಛೇರಿಗೆ ಜವಾನರೆಂದು ನೇಮಕ ಮಾಡಿ ಸದರಿ ಉಲ್ಲೇಖ (3)ರ ನೇಮಕಾತಿ ಆದೇಶವನ್ನು ಕೆಳಕಂಡ ಅಭ್ಯರ್ಥಿಗೆ RPAD ಮೂಲಕ ಕಳುಹಿಸಿ ಸದರಿ ನೇಮಕಾತಿ ಆದೇಶವು ಮುಟ್ಟಿದ ದಿನಾಂಕದಿಂದ ಹದಿನೈದು (15) ದಿನಗಳೊಳಗೆ ನೇಮಕಾತಿ ಮಾಡಿದ ಕಛೇರಿಯಲ್ಲಿ ತಪ್ಪದೇ ಕೆಲಸಕ್ಕೆ ಹಾಜರಾಗುವಂತೆ ಕೆಳಕಂಡ ಅಭ್ಯರ್ಥಿಗೆ ಸೂಚಿಸಲಾಗಿತ್ತು.

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | SC/ ST | ಅಭ್ಯರ್ಥಿಯನ್ನು ಜವಾನರೆಂದು ನೇಮಕ ಮಾಡಿದ ಕಛೇರಿ ಹೆಸರು | ವರ್ಗೀಕರಣ |
|---|---|---|---|---|
| 1. | ಮಹಾನಂದ ಸದಾಶಿವಪ್ಪ ನಾಯಕ (ಮಹಿಳೆ) C/o ಜಗದೀಶ್ ಗೌಡಪ್ಪಾ ಪಾಟೀಲ ಜವಾಹರ ನವೋದಯ ವಿದ್ಯಾಲಯ ಆಲಮಟ್ಟಿ ಡ್ಯಾಮ್ ಸೈಟ್ ತಾ: ಬಸವನಬಾಗೇವಾಡಿ, ಜಿಲ್ಲೆ: ಬಿಜಾಪುರ–586201 | ST | ಉಪ ನೋಂದಣಿ ಕಛೇರಿ, ಶಿರಹಟ್ಟಿ, ಗದಗ ಜಿಲ್ಲೆ. | ಪರಿಶಿಷ್ಟ ಪಂಗಡ ಮಹಿಳಾ ಅಭ್ಯರ್ಥಿ ಮುಖ್ಯಪಟ್ಟಿ |

ಆದರೆ ಮೇಲ್ಕಂಡ ಅಭ್ಯರ್ಥಿಯು ಸದರಿ ಉಲ್ಲೇಖ (3)ರ ನೇಮಕಾತಿ ಆದೇಶವನ್ನು ದಿನಾಂಕ:21.02.2011 ರಂದು ಸ್ವೀಕರಿಸಿದ್ದರೂ ಸಹ ಮೇಲ್ಕಂಡ ಅಭ್ಯರ್ಥಿಯು ಅವರನ್ನು ನೇಮಕ ಮಾಡಿದ ಮೇಲ್ಕಂಡ ಕಛೇರಿಯಲ್ಲಿ ಈ ತಹಲ್‌ವರೆವಿಗೂ ಕೆಲಸಕ್ಕೆ ಹಾಜರಾಗಿರುವುದಿಲ್ಲ.

ಮೇಲ್ಕಂಡ ಅಭ್ಯರ್ಥಿಯು ದಿನಾಂಕ:20.01.2011 ರಂದು ಈ ಕಛೇರಿಗೆ ಲಿಖಿತ ಮನವಿಯನ್ನು ಸಲ್ಲಿಸಿ ಸದರಿ ಮನವಿಯಲ್ಲಿ ತಾವು ಈಗಾಗಲೇ ಬೇರೆ ಕಡೆಗೆ ಕರ್ತವ್ಯ ನಿರ್ವಹಿಸುತ್ತಿದ್ದು ತಾವು ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಜವಾನರೆಂದು ಈ ಬ್ಯಾಕ್‌ಲಾಗ್ ಹುದ್ದೆಗೆ ಹಾಜರಾಗಲು ಆಗುವುದಿಲ್ಲದ ಕಾರಣ ಈ ಹುದ್ದೆಯಿಂದ ನನ್ನ ಹೆಸರನ್ನು ರದ್ದುಪಡಿಸಬೇಕೆಂದು ಉಲ್ಲೇಖ (4) ರನ್ವಯ ಈಗಾಗಲೇ ಲಿಖಿತ ಮನವಿ ಸಲ್ಲಿಸಿರುತ್ತಾರೆ.

ಆದ್ದರಿಂದ ಮೇಲ್ಕಂಡ ಅಭ್ಯರ್ಥಿಯ ನೇಮಕಾತಿಯನ್ನು ಕಾನೂನು ರೀತ್ಯಾ ರದ್ದುಪಡಿಸುವುದು ಸೂಕ್ತವೆಂದು ಮನಗಂಡು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಸಿಬ್ಬಂದಿ 39/10–11, ದಿನಾಂಕ:15.03.2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಉಲ್ಲೇಖ (1)ರ ಅಧಿಸೂಚನೆ ಅನ್ವಯ ಹಾಗೂ 1977ರ ಕೆ.ಸಿ.ಎಸ್. (ಸಾಮಾನ್ಯ ನೇಮಕಾತಿ) ನಿಯಮಗಳಲ್ಲಿನ 18 (3)ನೇ ನಿಯಮದನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಮೇಲ್ಕಂಡ ಮಹಾನಂದ ಸದಾಶಿವಪ್ಪ ನಾಯಕ (ಮಹಿಳೆ) ಎಂಬ ಬ್ಯಾಕ್‌ಲಾಗ್ ಅಭ್ಯರ್ಥಿಗೆ ನೀಡಿದ ಈ ಕಛೇರಿಯ ಉಲ್ಲೇಖ (3) ರ ನೇಮಕಾತಿ ಆದೇಶವನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಸದರಿ ಅಭ್ಯರ್ಥಿಯ ಕೋರಿಕೆ ಮೇರೆಗೆ ರದ್ದುಪಡಿಸಲಾಗಿದೆ.

ಮೇಲ್ಕಂಡ ಅಭ್ಯರ್ಥಿಯು ಈ ತಕ್ಷಣದಿಂದ ಈ ಇಲಾಖೆಯಲ್ಲಿನ ಈ ಜಿಲ್ಲೆಯ ಜವಾನರ ಹುದ್ದೆಯ ನೇಮಕಾತಿ ಹಕ್ಕನ್ನು ಕಳೆದುಕೊಂಡಿರುವರೆಂದು ಹಾಗೂ ಸದರಿ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದ್ದಲ್ಲವೆಂದು ಹಾಗೂ ಸದರಿಯವರು ಸದರಿ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ಈ ಮೂಲಕ ಆದೇಶಿಸಿದೆ.

ನೇಮಕಾತಿ ಪ್ರಾಧಿಕಾರಿ ಹಾಗೂ ಜಿಲ್ಲಾ
ನೋಂದಣಾಧಿಕಾರಿಗಳು, ಗದಗ ಜಿಲ್ಲೆ, ಗದಗ.

ಪಿ.ಆರ್.140

**THE KARNATAKA STATE BOARD OF WAKFS**

**"DARUL AWKAF" No.6, Cunningham Road, Bangalore-560 052**

**CERTIFICATE OF REGISTRATION**

**No.KBW/REG/5/GBA/2001-2002, Bangalore, Dated:30.12.2002**

It is hereby certified that the Wakf described hereunder is registered and brought on to the Register of Wakfs in accordance with Section 36 of the Wakf Act 1995.

| Sl.No of Kitabul Awkaf | Name, Class & Description of the Wakfs | Particulars of Wakf properties | Name of the Muthawalli |
|---|---|---|---|
| 381 | Madeena Masjid Khaja Colony, Jewargi Taluk, Gulbarga District. | Hence on 17-98<br>East-West – 94'<br>North- South – 147'<br>Total Area is 13818 Sq.ft.<br>**BOUNDARIES:**<br>EAST: Road<br>WEST: Road<br>NORTH: Passage<br>SOUTH: Road. | Madeena Masjid Khaja Colony, Jewargi Tq: Gulbarga District, Represented by its President. |

Chief Executive Officer,
Karnataka State Board of Wakfs.

PD-60